(ಸ್ವೈ. ವಾ. ವಾಮನರಾವ ಮಾಸ್ತರ ಇವರ ನಾಟಕಗಳು ೩)

# ಸಂದೇಹ ಸಾಮ್ರಾಜ್ಯ




ಬರೆದವರು

ಸ್ವೈ. ವಾ. ಸವಣೂರ ವಾಮನರಾವ ಮಾಸ್ತರರು

ಧಾರವಾಡ





ವಿಶ್ವಗುಣಾದರ್ಶ ಪ್ರಕಾಶನ ಸಮಿತಿ, ಧಾರವಾಡ

೧೯೪೪

ಬಿ.ಕೆ. ಪ್ರತಿ: ೧-೪-೦ ಗ್ಲೇಜ ಪ್ರತಿ: ೧-೮-೦

(ಪ್ರೈ. ವಾ. ವಾಮನರಾವ ಮಾಸ್ತರ ಇವರ ನಾಟಕಗಳು ೩)

# ಸಂದೇಹ ಸಾಮ್ರಾಜ್ಯ



ಬರೆದವರು

ಪ್ರೈ. ವಾ. ಸವಣೂರ ವಾಮನರಾವ ಮಾಸ್ತರರು

ಧಾರವಾಡ

ವಿಶ್ವಗುಣಾದರ್ಶ ಪ್ರಕಾಶನ ಸಮಿತಿ, ಧಾರವಾಡ

೧೯೪೪

ಬಿ. ಕೆ. ಪ್ರತಿ: ೧-೪-೦ ಗ್ಲೇಜ ಪ್ರತಿ: ೧-೮-೦

# ಸಂದೇಹ ಸಾಮ್ರಾಜ್ಯ



ಭಾಷಾನುವಾದಕರು :

ವೈ. ವಾ. ಸವಣೂರ ವಾಮನರಾವ ಮಾಸ್ತರರು



ಬೆಲೆ :

ಬಿ. ಕೆ. ಕಾಗದದ ಪ್ರತಿ : ೧—೪—೦

ಗ್ಲೇಜ ಕಾಗದದ ಪ್ರತಿ : ೧—೮—೦

# ಮುನ್ನುಡಿ



ವಿಶ್ವಗುಣಾದರ್ಶ ನಾಟಕ ಮಂಡಲದವರು ಬಹಳ ಯಶಸ್ವಿಯಾಗಿ ಪ್ರಯೋಗಿಸಿದ ನಾಟಕಗಳಲ್ಲಿ ಇದೊಂದು. ಪುಸ್ತಕರೂಪದಲ್ಲಿ ಈಗ ಕನ್ನಡ ರಸಿಕರ ಕೈಯಲ್ಲಿರಿಸಿದ್ದೇನೆ. ಓದುಗರು ಇದನ್ನು ಉತ್ಸಾಹದಿಂದ ಬರಮಾಡಿ ಕೊಳ್ಳುವರೆಂದು ನಾನು ಭಾವಿಸುತ್ತೇನೆ.

ಈಗ ಸುಮಾರು ೫೦ ವರುಷಗಳ ಹಿಂದೆ ಈ ನಾಟಕವು ಇಂಗ್ಲೀಷ ದಿಂದ ಮರಾಠಿಗೆ ಬಂದಿತು. ಆ ಭಾಷೆಗೆ ತಂದವರು ದಿವಂಗತ ದೇವಲ್ ರವರು. ಈವರೆಗೂ ಈ ನಾಟಕವು ಮಹಾರಾಷ್ಟ್ರದ ಜನತೆಯನ್ನು ಸಂತೋಷಗೊಳಿಸುತ್ತಿದೆ.

ನಮ್ಮಲ್ಲೂ ಈ ನಾಟಕ ರಂಗಭೂಮಿಯ ಮೇಲೆ ಬಂದು ೨೦ ವರುಷ ಗಳಾದವು. ನನ್ನ ತಂದೆಯವರಾದ ವೈ. ವಾ. ವಾಮನರಾವ ಮಾಸ್ತರರು ಕನ್ನಡಕ್ಕೆ ತಂದು, ತಮ್ಮ ಸ್ವಾಮಿತ್ವದ ರಂಗಭೂಮಿಯ ಮೇಲೆ ಪ್ರಯೋಗಿಸಿ ದರು. ೧೯೩೬ರಲ್ಲಿ ಬೆಂಗಳೂರಲ್ಲಿ ಇದು ಬಹಳ ಮನ್ನಣೆ ಪಡೆಯಿತು.

ಈ ಪುಸ್ತಕದ ಅಚ್ಚಿನ ಕಾರ್ಯ ನಡೆದಾಗ್ಗೆ, ನನ್ನ ತಂದೆಯವರ ಬಗ್ಗೆ ಆದರಬುದ್ಧಿಯನ್ನಿಟ್ಟುಗೊಂಡು - ನನ್ನ ಕಾರ್ಯದಲ್ಲಿ ನೆರವಾದ ಗೆಳೆಯ - ರಾ. ಶ್ರೀನಿವಾಸ ರಂಗೋ ಕುಲಕರ್ಣಿಯವರಿಗೆ ನಾನು ತುಂಬಾ ಉಪಕೃತ ನಾಗಿದ್ದೇನೆ. ಅಚ್ಚಿನ ಕಾರ್ಯ ಬೇಗನೆ ನೆರವೇರಿಸಿದುದಕ್ಕಾಗಿ ಬೆಂಗಳೂರು ಸಿಟಿ ಟೌನ್ ಪ್ರೆಸ್ ಒಡೆಯರಾದ ಶ್ರೀ. ಎಚ್. ಎಲ್. ಪ್ರಸಾದಜೀಯವರಿಗೆ ನನ್ನ ಧನ್ಯವಾದಗಳು. ಇನ್ನೂ ಬೇರೆ ಬೇರೆ ವಿಧವಾಗಿ ಸಹಾಯಮಾಡಿದ ಗೆ. ಚುಳ್ಕಿಯವರಿಗೆ ಋಣಿಯಾಗಿದ್ದೇನೆ.

೧-೧೦-೧೯೪೪ **ವೆ. ವಾ. ಸವಣೂರ**

|| ಶ್ರೀ ರಾಮ ಪ್ರಸನ್ನ ||

|| ಶ್ರೀ ಗುರುರಾಜೋ ವಿಜಯತೆ ||

# ಸಂದೇಹ ಸಾಮ್ರಾಜ್ಯ

## ೧ನೇ ಅಂಕ

### ೧ ನೇ ಪ್ರವೇಶ ನಾಂದಿ

ರಾಗ—ಹಿಂಡೋಲ, ತಾಳ—ಝಂಪ.

ವಾರಿನಿಧಿಶಯನಾ । ನೀರಜಾಸನವಂದಿತಾ । ಪವಮಾನ ವಿನುತಾ ॥ ಪ ॥
ಮಥಿಸಿ ಕಡಲನು ಅತಿವಿಲಾಸದಿ । ದಿತಿಜರಿಗೆ ವರ ಸುಧೆಯನುಣಿಸಿದ ॥ ೧ ॥
ಬಲಿಯಯಜ್ಞದಿ ಬೇಡಿದಾನವ । ಛಲದಿ ಬೆಳೆಸಿದೆ ಭಕ್ತ ಮಹಿಮೆಯ ॥ ೨ ॥
ಪರಮಹರುಷದಿ ನಾಟ್ಯಕುಸುಮವ । ಚರಣಕರ್ಪಿಸಿ ಧನ್ಯನಾಗುವೆ । ೩ ॥

[ಬೀದಿ. ಸಾಧುವು ಪ್ರವೇಶಿಸುವನು. ಎದುರಿಗೇ ವಿಜಯರಾಯರ ಮನೆ]

ರಾಗ—ತಿಲಕ, ಕಾಮೋದ—ದಾದರ.

ಶಾಂತಿ ಇದೇ ಸೌಭಾಗ್ಯಸುಖಕರ । ಸಂಸಾರಕೆ ಸ್ವಾಂತದಿ ನೆನಸೋ ಈ ಸವಿ
ಬೋಧ ॥ ಇಂತು ಸುಮತಿಯು ಪೇಳ್ವೆ ॥ ೧ ॥ ಕಡು ಸಂತಾಪಾ ॥ ಸಂಶಯ
ಜ್ವಾಲಾ ॥ ಸುಡುವದು ಮನವ ಸಂತತ ॥ ಅನಂತರೂಪಾ । ಲೋಕವಪಾತ್ರ
ನೀನೆಂಬದಿರೂ ಮನುಜಾ ॥ ೨ ॥

**ಸಾಧು**—ಇಂದು ನಮ್ಮ ಕಾರ್ತಿಕನಾಥನ ದೀಪೋತ್ಸವಕ್ಕಾಗಿ ದೇವಿಯವರು ಒಂದು ಮಣ ಎಣ್ಣೆಯನ್ನು ಕೊಡಲು ಒಪ್ಪಿರುತ್ತಾರೆ.

**ವಿಜಯ**—( ಒಳಗಣಿಂದ ) ಹೋಗು ಹೋಗೋ—ನಿನಗೆ ಇಲ್ಲಿ ಏನೂ ದೊರೆಯಲಾರದು !

**ಸಾಧು**—ಸ್ವಾಮೀ ತಾವು ನಮ್ಮ ಮೇಲೆ ಏಕೆ ಕೋಪಿಸುವಿರಿ ? ದೇವಿಯವರು ಕೊಡಲು ಒಪ್ಪಿ ಹೇಳಿದ್ದರಿಂದ, ನಾವು ಬೇಡುವುದಕ್ಕೆ ಬಂದಿರುವೆವು

**ವಿಜಯ**—( ಒಳಗಿನಿಂದ ) ಎಲೋ ಡಾಂಭಿಕಾ—ಸಾಧುವೇ ನೀನು ?

**ಸಾಧು**—ಸ್ವಾಮೀ ! ಇದೋ—ತಮಗೆ ಧರ್ಮಮಾಡುವುದು ಬೇಡವಾಗಿದ್ದರೆ, ಬಿಡಿ. ಆದರೆ ಸುಮ್ಮನೆ ಸಂಶಯಕ್ಕೆ ಒಳಗಾಗಬೇಡಿ. ಈ ಸಂಶಯ ವೃತ್ತಿಯು ದಾನ ಧರ್ಮಕ್ಕೆ ಅಡ್ಡವಾಗಿ ಬಂದು ಪುಣ್ಯಕ್ಷಯ ಮಾಡುವುದು. ಇಷ್ಟೇ ಅಲ್ಲ, ಒಮ್ಮೊಮ್ಮೆ ಸಂಸಾರದ ನಿತ್ಯ ವ್ಯವಹಾರದಲ್ಲಿಯೂ ಈ ಸಂಶಯ ಪಿಶಾಚಿಯು ಅಡ್ಡಬಂದು ಸುಖದಲ್ಲಿ ಮಣ್ಣು ಚೆರಿಸುವುದು. ಧರ್ಮಮಾಡಬೇಡಿ, ನಾನು ಹೋಗುವೆನು. ಆದರೆ ನಿಮ್ಮ ಸ್ವಂತ ಕಲ್ಯಾಣಕ್ಕಾಗಿ ನಾನು ಹೇಳುವ ಈ ಉಪದೇಶವನ್ನು ಮಾತ್ರ ಮರೆಯಬೇಡಿ!

**ವಿಜಯ**—( ಪ್ರವೇಶಿಸಿ ) ಎಲೋ ಡಾಂಭಿಕಾ—

ರಾಗ—ಶಂಕರಾ, ತಾಳ—ತ್ರಿಪುಟಿ.

**ಎಲೋ ಸಾಧುವೇ** ಖಲನಿನ್ನ ಬೋಧಾ ॥ ನಿಲೆಯುನಾ ॥ ಬಲ್ಲೆ ಬಲುಜವದಿ **ಪೋಗೈ** ॥ ೧ ॥ ಮರುಳ ವಿದ್ಯೆತೋರಿ ಪುರುಷ ಸ್ತ್ರೀಯರನ್ನು ॥ ಸರಸನುಡಿಯ **ನಾಡಿ** ॥ ಮರಳುಗೊಳಿಪೆನೀಚಾ ॥ ೨ ॥

ನಡೆ—ಹೊರಡು. ನನಗೆ ಎಲ್ಲವೂ ಗೊತ್ತಾಯಿತು. ನನ್ನ ಹೆಂಡತಿಗೆ ಏನಾದರೂ ಗುಪ್ತ ವರ್ತಮಾನವನ್ನೋ, ಇಲ್ಲವೇ ಪತ್ರವನ್ನು ಮುಟ್ಟಿಸುವುದಕ್ಕೋಸ್ಕರವೋ ಯಾವನಾದರೂ ವೇಷಾಂತರಿಸಿಕೊಂಡೇ ಬಂದಿರಬಹುದು! ಇದೆಲ್ಲವೂ ನಮ್ಮ ಪತ್ನಿಯವರ ಚೇಷ್ಟೆಯೋ! ( ಅಣಕಿಸುವಂತೆ ) ಈ ದಿವಸ ನಮ್ಮ ಅಕ್ಕನ ಭೇಟಿಗೆ ಹೋಗಬೇಕಾಗಿದೆ, ನಿನ್ನೆ ನನ್ನ ತಂಗಿಯು ಹೇಳಿ ಕಳಿಸಿದ್ದಳು, ನಾಳೆ ನಮ್ಮ ಅತ್ತಿಗೆಯವರ ಭೇಟಿಗೆ ಹೋಗಬೇಕಾಗಿದೆ, ಹೀಗೆ ದಿನಾಲು ಹೊಸ ಹೊಸ ಯುಕ್ತಿಗಳನ್ನೇ ಹುಡುಕಿ ತೆಗೆಯುತ್ತಿದ್ದಳು. ಆದರೆ ಈ ದಿವಸ ಅವಳ ಯಾವ ತಂತ್ರವನ್ನೂ ಕೇಳುವುದಿಲ್ಲ. ಮತ್ತು ಅದಕ್ಕೋಸ್ಕರವೇ ನಾನು ಈ ಪಿಶಾಚಪುರದ ಹೊರಗಡೆಯ ಬಂಗಲೆಯಲ್ಲಿ ವಾಸವಾಗಿದ್ದುದು ; ಇಲ್ಲದಿದ್ದರೆ ಇಂತಹ ಮೋಸಗಾರ್ತಿಯಾದ ಹೆಂಡತಿಯೊಡನೆ ಪಟ್ಟಣವಾಸದಲ್ಲಿದ್ದು ಕಾಯುವುದು ಹೆಚ್ಚಿನ ಕಷ್ಟ! ಈಚೀಚೆಗೆ ದೊಡ್ಡ

ದೊಡ್ಡ ಪಟ್ಟಣಗಳಲ್ಲಿ ಪೋಲಿ, ಪೋಕರಿ, ಮುತ್ಕಾಳ ಜನರ ಸುಳಿದಾಟ ವಂತೂ ವಿ.ತಿಮೀರಿಹೋಗಿದೆ. ಹರಿದಾಸರು, ರಾಮದಾಸರು, ಪುರಾಣೀಕರು, ವೇದಾಂತಿಗಳು, ಬ್ರಹ್ಮಚಾರಿಗಳು, ಮೋಸಮಾಡುವುದರಲ್ಲಿ ಒಬ್ಬರಿಗಿಂತಲೂ ಒಬ್ಬರು ಮಿಗಿಲಾದವರು. ಸರಿ ಈಗ ನಾನು ಮಾಡಿದ್ದೇ ಉತ್ತಮ! ಅವಳು ಹೊರಗೆ ಹೋಗದಂತೆ ಯಾರೊಡನೆಯೂ ಮಾತನಾಡದಂತೆ, ಕಣ್ಣಲ್ಲಿ ಕಣ್ಣಿಟ್ಟು ಜಪ್ತಿಸಬೇಕಾಗುವುದು ಆದರೂ ಚಿಂತೆಯಿಲ್ಲ. ಈಗ ನಾನು ಒಬ್ಬನೇ ಕೂಡುವುದಕ್ಕಿಂತ ಅವಳನ್ನು ಕರೆದು ದಮಯಂತಿಯ ಚರಿತ್ರೆಯನ್ನಾದರೂ ಓದೆಂದು ಹೇಳೋಣ. (ಒಳಗೆ ಇಣಿಕಿ) ಏನೆ! ಒಳಗೆ ಏನು ಮಾಡುವೇ? ಆ ಚಂದನದ ಪೆಟ್ಟಿಗೆಯ ಮೇಲೆ ಒಂದು ಪುಸ್ತಕ ಇರುವುದು. ಅದನ್ನು ತೆಗೆದುಕೊಂಡು ಬಾ. ನೋಡೋಣ. ಕೇಳಿತೇ? ಎಲಾ ಏನಿದು? ಉತ್ತರವೇ ಇಲ್ಲವಲ್ಲ! (ಎದ್ದು ಬಾಗಿಲಕಡೆ ನಡೆದು) ಯಾಕೆ? ಇನ್ನು ಮೇಲೆ ಮೌನವ್ರತವನ್ನು ಧರಿಸತಕ್ಕವಳೋ? ಎಲಾ ಇಲ್ಲಿಯೂ ಕಾಣಿಸುವುದಿಲ್ಲ! ಏನೇ—ಎಲ್ಲಿರುವಿಯೋ? (ಅತ್ತಿತ್ತ ನೋಡಿ)ಹೋದಳು! ಕೈಯಲ್ಲಿ ತುರಾಯಿ ಕೊಟ್ಟೇ ಹೋದಳು. ವೃಶ್ಚಿಕಾ! ಎಲೋ ವೃಶ್ಚಿಕಾ! ಬೇಗನೇಬಾ (ಸ್ವಗತ) ಈ ಕಳ್ಳನೂ ಸಹ ಅವಳಿಗೆ ಸಹಾಯಕನಾಗಿರಬಹುದೇ? (ವೃಶ್ಚಿಕನು ಬರುವನು.) ಎನಯ್ಯಾ ಅವಳು ಎಲ್ಲಿದ್ದಾಳೆ?

**ವೃಶ್ಚಿಕ**—ಬುದ್ಧೀ ಅವರು ಹಿತ್ತಲ ಬಾಗಿಲಿನಿಂದ ಕಾರ್ತಿಕನಾಥನ ದೇವಾಲಯದ ಕಡೆ ಹೋದರು.

**ವಿಜಯ**—(ಗಾಬರಿಯಿಂದ) ಏನು! ಹಿತ್ತಲಬಾಗಲಿನಿಂದ ಹೋದಳೇ! ವೃಶ್ಚಿಕಾ, ಈಗಿಂದೀಗಲೇ ಹೋಗಿ ಆ ಮರಗೆಲಸದವನನ್ನು ಕರೆದುಕೊಂಡುಬಾ, ಮತ್ತು ಆ ಹಿತ್ತಲಬಾಗಿಲು ಮುಚ್ಚಿಸಿಬಿಡು. ಇನ್ನುಮೇಲೆ ಇದೇ ನಿಶ್ಚಯ! ಎರಡು ಬಾಗಿಲುಗಳುಳ್ಳ ಮನೆಯಲ್ಲಿ ನಾನು ಎಂದೂ ವಾಸಮಾಡುವುದಿಲ್ಲ! ನಾನು ಅವಳನ್ನು ಕಾಯುತ್ತ ಮುಂಚೇ ಬಾಗಿಲಿನಲ್ಲಿ ಕುಳಿತರೆ, ಹಿತ್ತಲ ಬಾಗಿಲಿನಿಂದ ಹೋಗುತ್ತಾಳೆ. ಹಿತ್ತಲ ಬಾಗಿ

ಲಲ್ಲಿ ಕುಳಿತರೆ ಮುಂಚಿಯ ಬಾಗಿಲಿಂದ ಹೋಗುತ್ತಾಳೆ. ಹೀಗೆ ಹದಿನೇಳು ಬಾಗಿಲು ಮೂವತ್ತುಮೂರು ಗವಾಕ್ಷಗಳುಳ್ಳ ಮನೆಯಲ್ಲಿ ಗಂಡಸಿಗೆ ಎಷ್ಟು ಕಣ್ಣಿದ್ದರೂ ಏನು ಪ್ರಯೋಜನ! ಏನು ಹೇಳಿದೆ? ಕಾರ್ತಿಕನಾಥನ ದೇವಾಲಯಕ್ಕೆ ಹೋದಳೇ?

**ವೃಶ್ಚಿಕ**—ಹೌದು ಧಣಿಯರೇ!

**ವಿಜಯ**—ಚೆನ್ನಾಗಿ ನಟಿಸಿಕೊಂಡು ಹೋದಳೋ ಹೇಗೆ?

**ವೃಶ್ಚಿಕ**—ಇದೇನು ಬುದ್ಧೀ! ಹೀಗೆ ಕೇಳುವಿರಿ? ದಿನಾಲು ಹೋಗುವಂತೆಯೇ ಹೋದರು!

**ವಿಜಯ**—ಮೈಮೇಲೆ ಯಾವತ್ತೂ ಒಡವೆಗಳಿದ್ದವೋ? ಮತ್ತು ಆ ಬುಟಾದಾರೀ ಪೀತಾಂಬರ ಉಟ್ಟಿದ್ದಳೋ? ಮೈಮೇಲೆ ಆ ಕಲಾಬತ್ತಿನ ಶಾಲು ಹೊದ್ದಿದ್ದಳೋ?

**ವೃಶ್ಚಿಕ**—( ಯೋಚಿಸುತ್ತಾ ) ಹೌದು. ಹೌದು. ಧಣಿಯರೇ ತಾವು ಹೇಳುವಂತೆ ಎಲ್ಲವೂ ಇದ್ದವು.

**ವಿಜಯ**—ಸರಿ ಮತ್ತೆ! ಇದಕ್ಕೂ ಹೆಚ್ಚಿಗೆ ಏನು ಬೇಕು—

**ವೃಶ್ಚಿಕ**—ಧಣಿಯರೇ—ನನಗೆ ಯಾಕೋ ತಾವು ಮಾತಾಡುವ ರೀತಿಯು ಬೇರೆ ಕಾಣುವುದು. ಅತಿಪ್ರಸಂಗಿಯೆಂದು ತಾವು ಹೊಡೆದರೂ ಚಿಂತೆಇಲ್ಲಾ. ಆದರೆ ಅಮ್ಮನವರ ವಿಷಯವಾಗಿ ತಾವು ಹೀಗೆ ವಿಚಾರಿಸುವುದು ಸರಿಯಲ್ಲ! ನಾನು ತಮ್ಮ ಸೇವಕನು. ಆದರೆ ಈಚೀಚಿಗೆ ತಮ್ಮದು ಅಮ್ಮನವರ ಮೇಲೆ ಮೊದಲಿನಂತೆ ಮಮತೆಯೇ ಕಾಣುವುದಿಲ್ಲ!

**ವಿಜಯ**—ಮಮತೆ ಇಲ್ಲದಿದ್ದರೆ ಅವಳು ಹೀಗೆ ಮೋಸವನ್ನೇ ಮಾಡುತ್ತಿರಲಿಲ್ಲ. ನಾನು ಮಂಗನಾಗಿ ಗುಂಗೀ ಹುಳದಂತೆ ಅವಳಸುತ್ತಲೂ ಪ್ರದಕ್ಷಿಣೆ ಹಾಕುವುದಕ್ಕೆ ಪ್ರಾರಂಭಿಸಿದೆನೆಂದೇ, ಅವಳು ಮರ್ಯಾದೆಯ ಮುಸುಕನ್ನು ಬಿಸಾಕಿ ಮನಬಂದಂತೆ ಕುಣಿಯಲಾರಂಭಿಸಿದಳು. ನನ್ನದೇ ತಪ್ಪು. ಯಾಕಂದರೆ ಮೊದಲಿಸಿಂದ ನಾನೇ ಅವಳ ಕೂಡ

ವಕ್ರವಾಗಿದ್ದು, ಮೇಲಿಂದ ಮೇಲೆ ಮದಿಗಳನ್ನು ಹಾಕುತ್ತಬಂದಿದ್ದರೆ, ಸಾಕಿದ ನಾಯಿಯಂತೆ ನನ್ನ ಅಪ್ಪಣೆಯಲ್ಲಿಯೇ ಬಿದ್ದುಕೊಂಡಿರುತ್ತಿದ್ದಳು. ಆದರೆ ದೊಡ್ಡ ಮನೆತನದವಳು ಮತ್ತು ಚೆನ್ನಾಗಿ ವಿದ್ಯೆ ಕಲಿತವಳೆಂದು ನಾನು ಮಮತೆ ಮಾಡಿದರೆ, ಅದು ತಲೆಗೇರಿ ಈ ರೀತಿಯಾಗಿ ಪರಿಣಮಿಸಿತು!

**ವೃಶ್ಚಿಕ**—ಧಣಿಯರೇ-ಕ್ಷಮಿಸಿರಿ. ಅಮ್ಮನವರ ಮೇಲೆ ದೋಷ ಹೊರಿಸುವುದಕ್ಕೆ, ನನಗೆ ಒಂದು ಎಳ್ಳು ಕಾಳಷ್ಟು ಕೂಡ ಸ್ಥಳವು ಕಾಣಿಸುವುದಿಲ್ಲ. ಆದರೆ ತಮಗೇನು ಕಂಡುಬಂದಿರುವದೋ ಅದು ಆ ಭಗವಂತನೇ ಬಲ್ಲ.

**ವಿಜಯ**—ಏನು? ನಿನಗೆ ಅವಳ ಮೇಲೆ ದೋಷ ಹೊರಿಸಲಿಕ್ಕೆ ಒಂದು ಎಳ್ಳು ಕಾಳಷ್ಟು ಸ್ಥಳವು ಕಾಣಿಸುವುದಿಲ್ಲವೇ? ಹಾಗಾದರೆ ನನಗೆ ಒಂದು ಕುಂಬಳಕಾಯಿಯಷ್ಟು ಕಾಣಿಸುವುದಲ್ಲ, ಆದಕ್ಕೇನನ್ನುವೇ? ಎಲೋ— ಇವು ಗೃಹಛಿದ್ರಗಳು, ಇಂತಹ ವಿಷಯಗಳನ್ನು ಮತ್ತೊಬ್ಬರ ಮುಂದೆ ಮಾತಾಡಕೂಡದು—ಆದರೆ ನೀನು ಪೂರ್ವದಿಂದಲೂ ಇದ್ದವನು-ನಿಯತುಗಾರನು-ವಿಶ್ವಾಸಿಕನು ಎಂದು ನಿನಗೆ ನನ್ನ ಗುಟ್ಟನ್ನು ತಿಳಿಸುತ್ತೇನೆ. ಇದೋ ನೋಡು ಇಂದು ಅವಳು ನನ್ನ ಮುಖಕ್ಕೆ ಕಪ್ಪು ಹಚ್ಚುವ ವಿಚಾರ ನಡೆಸಿದ್ದಾಳೆ—ಕಪ್ಪು! (ವೃಶ್ಚಿಕನು ಬೆಚ್ಚುವನು.)

**ವೃಶ್ಚಿಕ**—ಧಣಿಯರೇ-ಅಮ್ಮನವರ ವಿಷಯವಾಗಿ ತಮ್ಮ ಮನಸ್ಸಿನಲ್ಲಿ ಇಂಥ ಕೆಟ್ಟ ಕಲ್ಪನೆಗಳು ಜನಿಸಿದ ಮೇಲೆ, ನಿಶ್ಚಯವಾಗಿಯೂ ಅವರಮೇಲೆ ಭಗವಂತನ ಕೋಪವಾಯಿತೆಂತಲೇ ನಾನು ತಿಳಿಯುತ್ತೇನೆ. ತಾವು ಹೇಗೆ ಅವರ ಮೇಲೆ ತಪ್ಪು ಹೊರಿಸುವಿರೋ ಹೊರಿಸಿರಿ. ಆದರೆ ನಾನು ಪ್ರಮಾಣಮಾಡಿ ಹೇಳುವದೇನೆಂದರೆ, ತಮ್ಮ ಸಂಶಯವು ಪೊಳ್ಳು, ಅರ್ಥವಿಲ್ಲದ್ದು, ನಾನಿದನ್ನು ಖಂಡಿತವಾಗಿ ಹೇಳುತ್ತೇನೆ.

**ವಿಜಯ**—ಏನು ನನ್ನದು ಪೊಳ್ಳು ಸಂಶಯವೆ? ಎಲವೋ ಮೊನ್ನೆ ಆ ಯಾದವರಾಯರ ಮನೆಯ ಮದುವೆಯ ಮೆರವ

ಣಿಗೆಯ ದಿವಸ ಅವಳು ನಡೆಸಿದ ಚೇಷ್ಟೆಗಳನ್ನು ಇವೇ ಕಣ್ಣುಗಳಿಂ ದಲೇ ನೋಡಿದ್ದೇನೆ. (ಅಣಕಿಸುವಂತೆ) ಏನಾದರೂ ಕಾರಣವನ್ನು ತೋರಿಸಿ ಮಧ್ಯದಲ್ಲಿ ನಗೋಣ, ನನ್ನ ಕಡೆಗೆ ನೋಡಿ-ಮೂಗು ಮುರಿ ಯೋಣ, ಒಳ್ಳೆ ಬಡಿವಾರದಿಂದ ಈಚೆಯಿಂದ ಆಚೆಗೆ ಹೋಗೋಣ! ಬೇಕೆಂತಲೇ ಪುರುಷರ ಅಂಗಕ್ಕೆ ತಾಕಲಾಡೋಣ-ಇಷ್ಟೇ ಏಕೆ? ಇನ್ನು ಸಹಸ್ರ ವಿಷಯಗಳು. ಲಗ್ನವಾದ ಹೊದಮೊದಲು ಕೆಲವು ದಿವಸ ಚೆನ್ನಾಗಿಯೇ ವರ್ತಿಸಿದಳು. ಆದರೆ ಈಚೀಚೆಗೆ ಆ ಮರ್ಯಾದೆ, ಆ ಸಭ್ಯತನ, ಆ ಲಜ್ಜೇ, ಎಲ್ಲಿ ಹೋಯಿತೋ ಕಾಣೆ. ಅದೂ ಹೋಗಲಿ ಈ ದಿವಸ ಅವಳು ನನ್ನನ್ನು ವಿಚಾರಿಸದೆ ಕಾರ್ತಿಕನಾಥನ ದರ್ಶನಕ್ಕೆ ಹೇಗೆ ಹೋದಳು ?

**ವೃಶ್ಚಿಕ**—ಬಹಳ ದಿವಸಗಳಿಂದ ಹೋಗಲು ಸಮಯ ದೊರೆಯಲಿ ಲ್ಲವೆಂದು ಈ ದಿವಸ ಹೋಗಿರಬಹುದು. ಅದರಲ್ಲಿಷ್ಟು ವಿಶೇಷವೇನು ?

**ವಿಜಯ**—ವಿಶೇಷವೇನು ? ಎಲೋ ನೀನು ಬೆಪ್ಪನೋ ಬೆಪ್ಪ ! ನಿನಗೆ ಏನೂ ತಿಳಿಯುವುದಿಲ್ಲ, ಹೊಳೆಯುವುದಿಲ್ಲ. ಅವಳು ಈಗ ದೇವರ ದರ್ಶನಕೆ ಹೋಗಿಲ್ಲ. ಈ ವೇಳೆ ದೇವಾಲಯದಲ್ಲಿ ಸುಳಿದಾಡುವಂಥ ಜಾರ ಪುರುಷರಿಗೆ ತನ್ನ ಮುಖವನ್ನು ತೋರಿಸುವುದಕ್ಕೆ ಹೋಗಿದ್ದಾಳೆ! ಇಂಥ ಹೆಂಗಸರು ನಟಿಸಿಕೊಂಡು ಹೀಗೆ ವಯ್ಯಾರ ಮಾಡುತ್ತ ಹೋಗುವ ಸ್ಥಳವು ಅದಲ್ಲದೆ ಮತ್ತಾವುದು ? ಏಕಂದರೆ-ಜಾರಪುರುಷರ ಸಮುದಾ ಯವು ಈ ವೇಳೆಯಲ್ಲಿ ಸೇರುವುದು ಅಲ್ಲಿಯೇ !

**ವೃಶ್ಚಿಕ**—ಅನ್ಯಾಯ - ಅನ್ಯಾಯವು-ಅನ್ಯಾಯವು ! ಧಣಿಯರೇ ಖಂಡಿತ ವಾಗಿಯೂ ಅನ್ಯಾಯವು. ಅಮ್ಮನವರ ಇದೇ ನಿಂದೆಯನ್ನು ಮತ್ತೊ ಬ್ಬರು ಮಾಡಿದ್ದರೆ ಈ ಸ್ಥಳದಲ್ಲಿ ಖೂನಿಯಾಗುತ್ತಿತ್ತು ಖೂನಿ !

**ವಿಜಯ**—ಎಲಾ ಕಳ್ಳ ! ಪಟಸಂಚುಗಾರ ! ಮೋಸಗಾರತಿಯಾದ ನನ್ನ ಹೆಂಡತಿಯನ್ನು ವರ್ಣಿಸುವಿಯಾ ? ನನ್ನ ಸಂಬಳ ತಿಂದು, ಅವಳ ಚಾಕರಿ ಮಾಡುವಿಯಾ ?

**ವೃಶ್ಚಿಕ**—ಮಹಾಸ್ವಾಮೀ, ತಮ್ಮ ಚಾಕರಿಗೆ ಇಂದೇ ನಮಸ್ಕಾರ! ಅಪ್ಪಣೆಯಾಗಲಿ-ಬಡವನು ಎಲ್ಲಿಯಾದರೂ ದುಡಿದು ಹೊಟ್ಟೆತುಂಬಿಕೊಳ್ಳುವನು. ಆದರೆ ಅಮ್ಮನವರಂಥ ನಿರ್ಮಲವಾದ ಮತ್ತು ಪವಿತ್ರವಾದ ಹೆಂಡತಿಯನ್ನು,ಮೋಸಗಾತಿಯೆಂದು ಅನ್ನುವ ಯಜಮಾನರ ಅನ್ನವು ನನಗೆ ಬೇಡವೇಬೇಡ. ನನ್ನ ಸಂಬಳ ತೀರಿಸಿರಿ. ನಾನು ಹೋಗುವೆನು. (ತನ್ನ ಸಾಮಾನುಗಳನ್ನು ಸಾವರಿಸಿಕೊಳ್ಳುವನು)

**ವಿಜಯ**—( ಸ್ವ ) ಇಷ್ಟರಲ್ಲಿಯೇ ಇವನನ್ನು ಹೀಗೆ ಭಯಪಡಿಸುವುದು ಸರಿಯಲ್ಲಾ. ಇವನನ್ನು ಮೊದಲು ಸಮಾಧಾನಪಡಿಸೋಣ! ಸತ್ಯವೋ ಮಿಥ್ಯವೋ ಎಂಬುದನ್ನು ಚೆನ್ನಾಗಿ ತಿಳಿಯದ ವಿನಹ ಇವನು ಚಾಕರಿಯನ್ನು ಬಿಟ್ಟುಹೋಗುವುದಕ್ಕೆ ಒಪ್ಪತಕ್ಕವನಲ್ಲ ಮತ್ತು ಇದುವರೆಗೂ ನಾನಾದರೂ, ಅವಳ ದುಷ್ಟವರ್ತನವನ್ನು ಎಂದೂ ಕಣ್ಣಿನಿಂದ ಪ್ರತ್ಯಕ್ಷ ನೋಡಿದವನೇ ಅಲ್ಲ! ಕದಾಚಿತ ನಾನು ಮಾಡುವವೆಲ್ಲವೂ ತರ್ಕವಿದ್ದರೂ ಇರಬಹುದು. ( ಪ್ರಕಾಶ ) ಎಲವೋ ಇದುವರೆವಿಗೂ ನಾನಾದರೂ ಅವಳನ್ನು ಪಕ್ಕಾ ಮೋಸಗಾರಳೆಂದು ಎಲ್ಲಿ ಅಂದಿದ್ದೇನೆ? ಅನ್ನುವುದೂ ಇಲ್ಲ! ಆದರೆ ಹೀಗೆ ಮಾಡುವುದು ಸ್ತ್ರೀಯರಿಗೆ ಸರಿಯಾದ್ದಲ್ಲ. ಸ್ತ್ರೀಜಾತಿಯನ್ನು ಕಟ್ಟಿರುವ, ಕಡಿವಾಣವನ್ನು ಸಡಿಲವಾಗಿ ಬಿಟ್ಟರೆ ಏನೂ ಉಪಯೋಗವಿಲ್ಲ! ಇಷ್ಟೇ ನನ್ನ ಅಭಿಪ್ರಾಯ ತಿಳಿಯಿತೆ? ಇಡು, ಇಡು ನಿನ್ನ ಸಾಮಾನುಗಳನ್ನು ಕೆಳಗೆ ಇಡು!

**ವೃಶ್ಚಿಕ**—ಧಣಿಯರೇ ತಮ್ಮ ಅಭಿಪ್ರಾಯವು ಸರಿಯಾದುದಲ್ಲ! ನಾನು ಮಂದಮತಿಯು, ನಾನು ತಮಗೆ ಹೇಳಬೇಕೆ? ಆದರೆ ಪ್ರತ್ಯಕ್ಷವಾಗಿ ಕಂಡುಹಿಡಿಯದೇ ಹೀಗೆ ಸಂಶಯ ತಕ್ಕೊಳ್ಳುವುದು ತಮ್ಮಂಥಾ ದೊಡ್ಡ ಮನುಷ್ಯರಿಗೆ ಗೌರವವಲ್ಲ!

**ವಿಜಯ**—ವೃಶ್ಚಿಕಾ, ನಾನು ಮಾತಾಡುವುದನ್ನು ನೀನು ನಿಜವೆಂದು ತಿಳಿದೆಯಾ? ಇದುವರೆವಿಗೂ ನಾನು ನಿನ್ನ ಮನಸ್ಸು ಪರೀಕ್ಷಿಸುವುದಕ್ಕೋಸ್ಕರ ಹಾಗೆ ಮಾತಾಡಿದೆನು. ಬಳ್ಳೇದುನೀನಿನ್ನು ನಾಯಿಯನ್ನು

ಅಡ್ಡಾಡಿಸಿಕೊಂಡು ಬರಲು ಹೋಗು. ನೀನು ಹೋಗಿ ಬಂದನಂತರ ನಿನಗೆ ಬೇರೆ ಮಹತ್ವದ ಕೆಲಸವನ್ನು ಹೇಳತಕ್ಕದ್ದಿರುವದು.

**ವೃಶ್ಚಿಕ**—ಸರಿ ನಾಯಿಯನ್ನು ಅಡ್ಡಾಡಿಸಿಕೊಂಡು ಈಗಲೇ ಬರುವೆನು (ಹೋಗುವನು)

**ವಿಜಯ**—ನಿಶ್ಚಯವಾಗಿ ನನ್ನ ಹೆಂಡತಿಯು ಇವನಿಗೆ ದ್ರವ್ಯದ ಆಶೆಯನ್ನೇ ತೋರಿಸಿರಬಹುದು. ಅಂತೆಯೇ ಇವನು ಅವಳ ಪಕ್ಷವನ್ನು ವಹಿಸಿ ಮಾತಾಡುವನು. ಇರಲಿ ಸಮಯಬಂದಾಗ ತೋರಿಸೋಣ ಕೈ ! ಸರಿ, ಈಗ ಅವಳು ಎಲ್ಲಿ ಹೋದಳು? ಕಾರ್ತಿಕನಾಥನ ದೇವಾಲಯಕ್ಕೆ ಹೋದಳೇ? ಈಗಲೇ ಅವಳನ್ನು ಮನೆಗೆ ಸೆಳೆದು ತಂದು ಕಂಭಕ್ಕೆ ಕಟ್ಟಿಹಾಕುವೆನು. ಆದರೆ ನಾನೇ ಮೊದಲು ಇಂಥ ಸ್ತ್ರೀಯಳ ಕೂಡ ಮದುವೆಯನ್ನೇ ಬೆಳಿಸದೇ ಇದ್ದಿದ್ದರೆ ಲೇಸಾಗುತ್ತಿತ್ತು.

ರಾಗ—ಹಮೀರ, ತಾಳ ತ್ರಿವಟ.

**ಇಂತಹ ದುರುಳ ಸತಿಯ ವರಿಸೀ । ಅಂತರ್ಯದಿ ಬಹು ನೊಂದುವೆನಕಟಾ ॥ಪ॥**
**ಬಾಹ್ಯ ಶುಶೀಕ್ಷಣ ರೂಪವನೋಡೀ ಮೋಹಿಸಿದೇ ಬರಿ । ಶ್ರೇಷ್ಠವಂಶಕೇ । ತಾಪ ಪೊಂದುದೆ ॥ ೧ ॥**

## ೨ ನೇ ಪ್ರವೇಶ

( ಬೀದಿ—ಆನಂದಶೇಟನು ಬರುವನು )

**ಆನಂದ**—ನಾನು ಈ ದಿವಸ ಮಾಡುವ ವಿಚಾರಕ್ಕೆ, ನನ್ನ ಪರಮ ಮಿತ್ರ ನಂದನಶೇಟನು ಸಮ್ಮತಿಸುವುದೇ ಇಲ್ಲ. ಮತ್ತು ಅವನ ಅಭಿಪ್ರಾಯ ವಾದರೂ ಸರಿಯಾಗಿಯೇ ಇದೆ ! ನಾನು ಇಂತಹ ಪ್ರಸಂಗದಲ್ಲಿ ರಾಜಮಾರ್ಗವನ್ನು ಬಿಟ್ಟು-ಅಡ್ಡ ದಾರಿಯಲ್ಲಿ ಹೋಗುವ ಮನಸ್ಸು ಮಾಡಿದರೆ, ಅದು ಅವನಿಗೆ ಹೇಗೆ ಸರಿಬಂದೀತು. ಅಥವಾ ನಾನಾ ದರೂ ಏನು ಮಾಡಲಿ ? ಒಳ್ಳೇ ಪ್ರಾಯದಲ್ಲಿಯೇ ಮೂರು ಜನ ಹೆಂಡಂದಿರು ಮೃತರಾಗಿ ಹೋದರು. ಮುಂದೆ ನಾಲ್ಕನೆಯ ಲಗ್ನ ಮಾಡಿಕೊಳ್ಳಬೇಕೆಂಬ ವಿಚಾರ ಮಾಡುವಷ್ಟರಲ್ಲಿ ಹಿಂದೂಸ್ಥಾನದ

ಲ್ಲಿಯೇ ಸುಪ್ರಸಿದ್ಧರಾದ ಜ್ಯೋತಿಷಿ ಸೋಮೇಶ್ವರಭಟ್ಟರ ಭೆಟ್ಟಿ
ಯಾಯಿತು. ಅವರಿಗೆ ನನ್ನ ಜನ್ಮಪತ್ರಿಕೆಯನ್ನು ತೋರಿಸಿದೆನು.
ಪತ್ರಿಕೆಯನ್ನು ನೋಡಿದ ಕೂಡಲೇ ಜ್ಯೋತಿಷ್ಯರು "ನಿಮಗೆ ಮಂಗಳ
ಗೃಹವು ಅತ್ಯಂತ ಅನಿಷ್ಟಕಾರಕನಿರುವುದರಿಂದ ಭಾರ್ಯಾಸ್ಥಾನದಲ್ಲಿ
ದುಷ್ಟಗ್ರಹಗಳ ದೃಷ್ಟಿಯೇ ಸಂಪೂರ್ಣವಾಗಿದೆ. ಕಾರಣ ನಿಮಗೆ
ಲಗ್ನದ ಹೆಂಡತಿಯು ಯೋಗಾಯೋಗವೇ ಇರುವುದಿಲ್ಲ—ಮತ್ತು
ನೀವು ಈ ತೊಂದರೆಯಲ್ಲಿ ಬೀಳಬೇಡಿರಿ " ಎಂದು ಸ್ಪಷ್ಟವಾಗಿ ಹೇಳಿ
ದರು. ಮತ್ತು ಅವರು ಹೇಳಿದ ವಿಷಯ ನನಗೂ ಚೆನ್ನಾಗಿ ಅನು
ಭವಕ್ಕೆ ಬಂದಿರುವುದು. ಇನ್ನು ಮುಂದೆ ಯಾವಳಾದರೂ ಒಬ್ಬ
ನಾಯಕಸಾನಿಯ ಹುಡುಗಿಯನ್ನು ಶೋಧಿಸಿ, ಅವಳಕೂಡ ಲಗ್ನದ
ಹೆಂಡತಿಯಂತೆ ಸಂಸಾರ ಸುಖವನ್ನು ಅನುಭವಿಸಬೇಕೆಂದು ನಿಶ್ಚ
ಯಮಾಡಿದ್ದಾಯಿತು. ನನಗೆ ಮೊದಲು ಈ ಧನಿಷ್ಠಾಸಾನಿಯ ಮಗಳು
ಶತತಾರಿಕೆಯ ಮೇಲೆ ಪೂರ್ಣ ಮಮತೆ ಇತ್ತು. ಮತ್ತು ಒಂದು
ತಿಂಗಳಿಂದ ಅವರ ಮನೆಗೆ ಹೋಗಿ ಬಂದು ಅವಳ ಪರೀಕ್ಷೆಯನ್ನು
ಮಾಡಿದ್ದಾಯಿತು. ಮತ್ತು ಅವಳು ಕೂಡ, ಯಾವನಾದರೂ ನನ್ನಂಥ
ಶ್ರೀಮಂತ ಮನುಷ್ಯನ ಕೂಡ ಲಗ್ನದ ಹೆಂಡತಿಯಂತೆ ಸಂಬಂಧವನ್ನು
ಬೆಳೆಯಿಸಿ ಜನ್ಮವಿರುವವರೆಗೆ ಸಂಸಾರ ಸುಖವನ್ನು ಅನುಭವಿಸಬೇ
ಕೆಂದು ನಿಶ್ಚಯಮಾಡಿ, ಈಗ ಮೂರು ವರ್ಷಗಳಿಂದ ಕೌಮಾರಿಕಾ
ವಸ್ಥೆಯಲ್ಲಿಯೇ ಕಾಲ ಕಳೆಯುತ್ತಿರುವಳು. ಯೋಗಾಯೋಗವು
ಕೂಡಿ ಬರಬೇಕಾದರೆ ಹೀಗೆ ಏನಾದರೂ ಸರ್ವೋತ್ಕೃಷ್ಟವಾಗು
ವುದು. ನಾನು ನಿನ್ನಿನ ದಿವಸ ಈ ವಿಷಯವಾಗಿ ಅವಳ ಕೂಡ
ಪ್ರಸ್ತಾಪಿಸಿದೆನು. ಅದಕ್ಕೆ ಅವಳು ಈ ದಿವಸ ರಮಾಕಾಂತನ ಪ್ರತ್ಯಕ್ಷ
ವಚನ ಕೊಡುತ್ತೇನೆಂದು ಹೇಳಿ ಹೊರಟುಹೋದಳು. ಈ ವಿಷಯವು
ಧರ್ಮದ ದೃಷ್ಟಿಯಿಂದ ಕಿಂಚಿತ್ ಗೌಣವಿದ್ದರೂ ಪ್ರೇಮ-ಸುಖದ
ದೃಷ್ಟಿಯಿಂದ ಈ ಯೋಗಾಯೋಗವು ಸರ್ವೋತ್ಕೃಷ್ಟವಿರುವುದು.
( ಕೇಳಿಸಿವಂತೆಮಾಡಿ ) ಎಲಾ! ಈ ಮಂಜುಳವಾದ ಧ್ವನಿಯು ಏತ
ರದು ? ಸಂಶಯವೇಕೆ ? ಇದು ಅವಳ ಕಾಲೊಳಗಿನ ಪೈಜಣ

ಧ್ವನಿಯೇ ! ಆಹಾಹಾ- ಈ ಪ್ರೈಜಣ ಧ್ವನಿಯಾದರೂ ಹೇಗೆ ಸರಿ ಯಾಗಿ ಶ್ರುತಿಗೆಶ್ರುತಿ ಸೇರಿಹೋಗಿದೆ—ಹೌದು-ಅವಳೇ ! ಬರಬೇಕು. ಬರ ಬೇಕು- "ತೃಷಿತತ್ವಾತ್ ಮೇಘಮಾಲೆ" ಬರಬೇಕು ಬರಬೇಕು.

ರಾಗ—ಜೀನಪುರಿ, ತಾಳ—ಧುಮಾಳಿ.

ಸುರವಮಣೀ । ದೇವಪುರದಿ ಭೂತಲಕ್ಕೈದಿಹಳೋ ॥ ಪ ॥ ಬೀರುತೆಮೋಹಾ । ಪರಿಮಳಗಂಧ ॥ ಸಾರಿ ಬರುವಳ್ಳೆ ಯೌವ್ವನೆ । ಅತಿಲಾವಣ್ಯೆ ॥ ೧ ॥

**ಶತತಾರ**—( ಪ್ರವೇಶಿಸಿ ) ಬೇಷ್. ಬೇಷ್. ಗಾಯನವು ಒಳ್ಳೆ ಸೊಗಸಾಗಿ ಕಳೆಕಟ್ಟಿದೆ ! ಇಷ್ಟು ದಿವಸ ಈ ನಿಮ್ಮ ಸಂಗೀತ ಕುಶಲತೆಯನ್ನು ನೀವು ನನಗೆ ತೋರಿಸಲೇ ಇಲ್ಲ?

**ಆನಂದ**—ಅದು ಇಷ್ಟುದಿವಸ ಈ ಸಂಗೀತ ದೇವತೆಯ ಮುಂದೆ ನಾಚಿ ಕೊಂಡು ಮರೆಯಾಗಿತ್ತು.

**ಶತತಾರ**—ಹಾಗಾದರೆ ಈ ದಿವಸ ಸಮಯ ಚೆನ್ನಾಗಿ ದೊರೆಯಿತೆ?

**ಆನಂದ**—ಅದಕ್ಕೆ ಈ ಪ್ರಫುಲ್ಲಿತವಾದ ಮುಖಕಮಲವೇ ಸಾಕ್ಷಿಯಾಗಿದೆ

**ಶತತಾರ**—ಮನಸ್ಸಿನಲ್ಲಿ ಮಂಡಿಗೆ ತಿನ್ನುವುದಕ್ಕೆ ಬೇಡವೆನ್ನುವರಾರು ?

**ಆನಂದ**—ಪ್ರತ್ಯಕ್ಷ ದೊರೆತಮೇಲೆ ಮನಸ್ಸಿನಲ್ಲಿ ತಿನ್ನುವರಾರು ?

**ಶತತಾರ**—ಬೇಷ್-ಬೇಷ್-ಸರಿಯಾಗಿ ಪ್ರಾಸಕ್ಕೆ ಪ್ರಾಸಕೂಡಿಸಿ ಉತ್ತರ ಕೊಡುವಿರೋ? ಹಾಗಾದರೆ ನೀವು ಈ ಕವಿದೀಕ್ಷೆಯನ್ನು ಸ್ವೀಕರಿಸಿ ಎಷ್ಟು ದಿವಸಗಳಾದವು ?

**ಆನಂದ**—ನಾನು ಯಾವ ದಿವಸ ಈ ಸದ್ಗುಣದ ಮತ್ತು ಲಾವಣ್ಯದ ಮೋಹಪಾಶದಲ್ಲಿ ಸಿಲುಕಿದೆನೋ, ಅಂದಿನಿಂದ ಈ ಕವಿದೀಕ್ಷೆಯನ್ನು ಸ್ವೀಕರಿಸಿರುವೆನು !

**ಶತತಾರ**—ಕವಿತ್ವಕ್ಕೆ ಅಂತಹ ಮನೋಹರ ವಿಷಯವಾವುದು ?

**ಆನಂದ**—ನೀನು ! ನಿನ್ನ ತಾರುಣ್ಯ, ನಿನ್ನ ರೂಪು—ನಿನ್ನ ಸದ್ಗುಣ-ನಿನ್ನ ಸುಹಾಸ್ಯವದನ, ನಿನ್ನ ನಡಿಗೆ- ನಿನ್ನ ನೋಟ-ನಿನ್ನ ವೈಕಟ್ಟು- ಸರ್ವವೂ ನೀನೆ !

**ಶತತಾರ**—ಅದು ಹೋಗಲಿ ಬಿಡಿ. ಪುರುಷರು ಸುಮ್ಮನೆ ಪ್ರಶಂಸೆ ಮಾಡು ವುದೇ ಬಹಳ. ಈ ದಿವಸ ನೀವು ನನಗೆ ನಿಮ್ಮ ಭಾವಚಿತ್ರವನ್ನು ಕೊಡುತ್ತೇನೆಂದು ಒಪ್ಪಿದ್ದಿರಷ್ಟೆ. ಅಥವಾ ಸುಳ್ಳೇ ಹೊಡಿದಿರೋ ?

**ಆನಂದ**—ಏನೇ, ಚಿತ್ರವೇ ಪ್ರತ್ಯಕ್ಷವಾಗಿದ್ದಮೇಲೆ ಭಾವಚಿತ್ರವೇತಕ್ಕೆ ?

**ಶತತಾರ**—ನಡೆಯಿರಿ, ನನ್ನ ಜೊತೆಗೆ ಮಾತಾಡಬೇಡಿರಿ! ( ಕೋಪಿಸುವಳು )

**ಆನಂದ**—ಬೇಷ್ ಇದಕ್ಕೆ ಅನ್ನಬೇಕು-ಅಭಿನಯವೆಂದು ! ತೆಗೆದುಕೋ ಭಾವಚಿತ್ರವನ್ನು ( ಭಾವಚಿತ್ರವನ್ನು ಕೊಟ್ಟು ) ನನ್ನಗಿಂತಲೂ ಈ ಭಾವಚಿತ್ರವೇ ಅದೃಷ್ಟಶಾಲಿಯು.

**ಶತತಾರ**—ಈ ಭಾವಚಿತ್ರವು ತಮ್ಮದೇಯೋ?

ರಾಗ--ಪಹಡಿ, ತಾಳ—ತ್ರಿವಟ.

ಸಾಮ್ಯವೇನೂ । **ಕಾಣೆನಾ** ॥ ನಿಮ್ಮ ಮುಖಕೆ ಇನಿತುಹಾ ॥ಪ॥ ಗುರುತಿಗಾಗಿ ಪಣೆ ಯೊಳು । ಕೊರೆದುಕೊಳ್ಳಿನಾಮವಾ ॥ ಅ–ಪ ॥ ಚತುರ ಚಿತ್ರಗಾರ್ತಿಯ । ಕೃತಿ ಯದೊಂದು ನಿಮ್ಮಯ ।ಅತುಲ ರೂಪ ಸುಂದರ।ಪ್ರತಿಮೆ ಎನ್ನ ಬಳಿಯಿದೆ ॥೧॥

**ಆನಂದ**—ತೋರಿಸು. ತೋರಿಸು. ಎಲ್ಲಿದೆ ನೋಡುವಾ ? ಅದರಂತೆ ನಿನ್ನ ದೊಂದು ಭಾವಚಿತ್ರವು ನನ್ನ ಹತ್ತಿರವಿದೆ. ಆದನ್ನು ನಿನಗೆ ತೋರಿ ಸುತ್ತೇನೆ. ಹೂ. ಬೇಗನೆ ತೋರಿಸು. ತೋರಿಸುನೋಡುವಾ !

**ಶತತಾರ**—ಅಯ್ಯೋ ಇಷ್ಟೇಕೆ ಅವಸರ--ಇದೋ ನೋಡಿ ಈ ಹೃದಯ ಮಂದಿರದಲ್ಲಿ ತೂಗು ಹಾಕಿದೆ.

**ಆನಂದ**—ಸರಿ-ಬೇಕಾದ ಉತ್ತರವೇ ದೊರೆಯಿತು. ನಡೆ ಹಾಗಾದರೆ ಶ್ರೀ ರಮಾಕಾಂತನ ಪ್ರತ್ಯಕ್ಷ ಕರಗ್ರಹಣದ ಮಂಗಲ ವಿಧಿಯನ್ನು ಅತ್ಯಂತ ಆನಂದದಿಂದ ಜರುಗಿಸುವಾ-!

**ಶತತಾರ**—ಆದರೆ ಅದಕ್ಕೆ ಮೊದಲು ತಮಗೆ ಒಂದು ವಿಷಯವನ್ನು **ತಿಳಿಸ** ಬೇಕಾಗಿದೆ,ಅದನ್ನು ಮಾತ್ರ ತಾವು ಚೆನ್ನಾಗಿ ನೆನಪಿನಲ್ಲಿಡಬೇಕು. **ಆ!**

**ಆನಂದ**—ಏನೇ, ಒಂದೇ ಏಕೆ-ಸಾವಿರಾರು ವಿಷಯ ಹೇಳು. ಇನ್ನು ನನಗೆ ಬೇರೆ ಕೆಲಸವೇನು? ನೀನು ಹೇಳತಕ್ಕವಳು. ನಾನು ಕೇಳತಕ್ಕವನು. ಹೂ ಹೇಳು. ಹೇಳು ಬೇಗನೆ.

**ಶತತಾರ**—ನಾನು ಹೇಳುವುದೇನೆಂದರೆ ತಮ್ಮ ಸ್ವಭಾವವು ಸ್ವಲ್ಪ ಮುಂಗೋಪ. ಸುಮ್ಮನೆ ಏನಾದರೂ ಕಲ್ಪನೆಯನ್ನು ರಚಿಸಿ ನನ್ನ ವಿಷಯವಾಗಿ ಇಲ್ಲದ ಸಂಶಯ ತೆಗೆದುಕೊಂಡರೆ-ನನಗೆ ಅದೂ-

**ಆನಂದ**—ತಿಳಿಯಿತು ಏನೇ-ಹೀಗೆ ಮುಖದಲ್ಲಿ ಬೇಸರಿಕೆಯನ್ನು ತೋರಿಸ ಬೇಡ. ನಿನ್ನ ವಿಷಯವಾಗಿ ನನಗೆ ಎಂದಾದರೂ ಸಂಶಯ ಬಂದೀತೆ ?

**ಶತತಾರ**—ಈ ಮಂಗಲ ಸಮಯದಲ್ಲಿಯೇ ನಿಮಗೆ ನನ್ನ ಅಭಿಪ್ರಾಯವನ್ನು ಸೂಚಿಸಿದೆನು. ಯಾಕೆಂದರೆ ನನ್ನದಾದರೂ ಹುಡುಗಾಟಿಕೆಯ ಸ್ವಭಾವವು. ಏನಾದರೊಂದು ತಪ್ಪು ಕೆಲಸವು....

**ಆನಂದ**—ತಿಳಿಯಿತು. ತಿಳಿಯಿತು. ಮತ್ತು ಇಂಥ ಸ್ವಭಾವದಲ್ಲಿಯೇ ವಿಶೇಷ ಚಮತ್ಕಾರವಿದೆ !

**ಶತತಾರ**-ಇದಲ್ಲದೆ-ನಾನು ಮಾನಿಷ್ಠಳು. ಮತ್ಸರ ಸ್ವಭಾವದವಳು. ಸ್ವಲ್ಪ ಕೋಪಿಷ್ಟಳೂ ಇದ್ದುದರಿಂದ-

**ಆನಂದ**—ಸರಿ ಹಾಗಾದರೆ-ಇಂತಹ ಗುಣಗಳು ಸಂಸಾರದಲ್ಲಿ ಅವಶ್ಯವಾಗಿ ಬೇಕೇ ಬೇಕು! ಏಕೆ-ಹೇಳುವುದೆಲ್ಲಾ ತೀರಿತೇ?

**ಶತತಾರ**—ಇಲ್ಲಾ ಇನ್ನೂ ಸ್ವಲ್ಪ ಹೇಳತಕ್ಕದ್ದಿರುವುದು !

ರಾಗ—ಮಾಂಡ, ತಾಳ—ದಾದರ.

ಸಾರುವೆನಾ ಸುವಿಚಾರ । ಸರಸದಿಮುನ್ನ ವಿವರ ॥ ಪ ॥ ಕುಲಮಾನ್ಯರುತಾ ಮತಿಧನಾಢ್ಯರು ॥ ಕುಲದಿ ನೀಚ ನಾ ಮಹಾಪಾಪಿ ॥ ೧ ॥

**ಆನಂದ**—ತಿಳಿಯಿತು. ಚೆನ್ನಾಗಿ ತಿಳಿಯಿತು.

**ಶತತಾರ**—ಸರಿ ಹಾಗಾದರೆ—

ರಾಗ—ಹಸಕಿಂಕಿಣಿ, ತಾಳ—ಝಂಪಾ.

**ಪಾದಾಂಬುಜಕೆ ಬಾಗಿ । ಅರ್ಪಿಸುವೆ ಕಾಯಾ ॥ ಪ ॥ ಮುದವೀವ ಈ ಕರವ । ತಮ್ಮ ಕರದೊಳೀವೆ ॥ ಸಾದರದಿ ನಾಥಾ ಪಿಡಿದೂ ಸತಿಪದವನೀಯೋ ॥ ೧ ॥**

ರಾಗ—ದೇಶ, ತಾಳ—ತ್ರಿವಟಿ.

**ಕರವ ಪಿಡಿದೆ ಶುಭಾಂಗಿ । ಸ್ಮರಿಸಿ ರಮೇಶನ । ಚರಣಗಳನು ಮನದೆ । ಪಿಡಿದೇ ॥ ಪ ॥ ಎನ್ನ ಸುಖದ ಸುರ । ಚಿಂತಾಮಣಿಯೆ । ವಿನಯ ಗೃಹ ಸಿರಿಯೆ । ಸಹಕಾರಿ ॥ ೧ ॥**

**ಆನಂದ**—( ಆಚೆ ಈಚೆ ನೋಡಿ ) ಇದರಮೇಲೆ ಒಂದು—

**ಶತಕಾರ**—ಅದೋ-ನೋಡಿ ಅತ್ತ ಕಡೆಯಿಂದ ಯಾರೋ ಬರುವಂತೆ ಕಾಣು ವುದು! ಈ ದಿವಸ ರಾತ್ರಿ ಸತ್ಯನಾರಾಯಣ ಪೂಜೆಗೆ ನೀವೂ ಬೇಗನೆ ಬರಬೇಕು. ನಾನೂ ಈಗ ಕಾರ್ತಿಕನಾಥನ ದರ್ಶನ ತಕ್ಕೊಂಡು ಮನೆಗೆ ಹೋಗುತ್ತೇನೆ !

**ಆನಂದ**—ನಾನೂ ಬರಲೇ, ಅಂದರೆ ಉಭಯತರಿಗೆ ದರ್ಶನ ತೆಗೆದುಕೊಳ್ಳು ವುದಕ್ಕೆ ಯೋಗ್ಯವಾಗುವುದು.

**ಶತಕಾರ**—ಛೆ-ಇದೇನು ವಿಪರೀತ ( ಕಣ್ಣುಸನ್ನೆ ಮಾಡುವಳು )

**ಆನಂದ**—ಆ ಹಾ ಹಾ—

ರಾಗ—ಸಾರಂಗ, ತಾಳ—ಏಕ್ತಾ;

ಭಾಗ್ಯ ಸೌಖ್ಯ ಶುಭದಿನವ ಕಂಡೆನುನಾ ॥ ಮನಮೋಹನಚಂದ್ರಾನನೆ । ಎನಗೆ ಪ್ರಾಪ್ತವಾಗೆ । ನಾ ಧನ್ಯನಾದೇ ॥ ೧ ॥ ಕುಲದೇವತೆಯಾರಾಧನೆ । ಸುಲಭ ಸುಫಲವಾಗಿ ॥ ಮೋದವ ಪಡದೇ ॥ ೨ ॥

## ೩ ನೇ ಪ್ರವೇಶ

( ವಿಜಯರಾಯರ ಮನೆ—ಪೂರ್ಣಿಮಾದೇವಿಯವರು ಬರುವರು )

**ಪೂರ್ಣಿಮಾ**—ನಾನು ಅವರ ಕಣ್ಣು ತಪ್ಪಿಸಿ ಅವಸರದಿಂದ ದೇವರ ದರ್ಶನ ತೆಗೆದುಕೊಂಡು ಬಂದೆನು. ಆದರೆ ಮನೆಯಲ್ಲಿ ಸವಾರಿಯು ಏನೇನು ಗಲಾಟೆ ಮಾಡಿರುವುದೋ ಕಾಣೆ-! ಅಮ್ಮಯ್ಯಾ ಬಾಗಿಲು ಮುಚ್ಚಿ ರುವುದು ! (ಧಕ್ಕೆ ಹೊಡೆಯುವಳು) ಪ್ರತಿಪದೆ ! ಪ್ರತಿಪದೆ-ಬಾಗಿ ಲನ್ನು ತೆರೆಯೋ-! ಥೂ ಒಬ್ಬರೂ ಉತ್ತರವನ್ನೇ ಕೊಡುವುದಿಲ್ಲ. ಇವಳು ಒಳಗೆ ಏನು ಮಾಡುತ್ತಿರಬಹುದು ? ಮತ್ತು ಇವರೇನು ಮಾಡುತ್ತಿರಬಹುದು ? ಏನಾದರು ಕಳ್ಳತನವಿದ್ದರೆ ತಾನೇ ಬೈಲಿಗೆ ಬೀಳುವದು. ಆದರೆ ಇವರು ಬಾಗಿಲು ತೆಗೆಯುವಂತೆ, ಯಾವ ಹಂಚಿಕೆ ಮಾಡಬೇಕು ? ಪ್ರತಿಪದೆ ! ಏ ! ಪ್ರತಿಪದೆ-ಎಲ್ಲಿಯಾದರೂ ಓಡಿಹೋದಳೋ ಏನೋ-ಇನ್ನೇನು ಮಾಡಬೇಕಮ್ಮಾ-ಏನೇ ಬಾಗಿಲ

ನನ್ನ ತೆರೆಯೇ-ನಾನು ಇಲ್ಲಿಯೇ ಹೀಗೆ ಕೂಗುತ್ತಾ ನಿಂತರೆ ಉಪ ಯೋಗವೇನು ? ಮುಂದಿನ ಬಾಗಿಲಿದಲ್ಲಿ ಹೋಗಿ ಮರೆಯಾಗಿ ನಿಂತು ಕೊಳ್ಳೋಣ. (ಪ್ರತಿಪದೆ, ಸಪ್ತಮಿಯವರು ಬಾಗಿಲು ತೆಗೆದು ಬರುವರು)

**ಪ್ರತಿ**—ಇಲ್ಲಿ ನೋಡಿದರೆ ಯಾರೂ ಕಾಣುವದಿಲ್ಲ. ಹಾಗಾದರೆ ಬಾಗಿಲನ್ನು ತಟ್ಟಿದವರಾರು? ಸಪ್ತಮೀ, ನೋಡಿದೆಯಾ-ಇಲ್ಲಿ ಹೀಗೆ ಯಾವಾಗಲೂ ಚಮತ್ಕಾರವಾದ ಸಂಶಯ ಪಿಶಾಚದ ಚೇಷ್ಟೆಗಳು ನಡೆಯುತ್ತಿವೆ. ನೋಡಿದರೆ ಸತಿಪತಿಗಳು ಸರಳ ಸ್ವಭಾವದವರು. ಆದರೆ ಈ ಉಭ ಯತರನ್ನೂ ಈ ಸಂಶಯ ಪಿಶಾಚಿಯು ಪೀಡಿಸುತ್ತಿರುವದು. ಒಳ್ಳೇದು ನೀನು ಮತ್ತೆ ಯಾವಾಗ ಬರುವೆ? ಸ್ವಲ್ಪ ತಡೆಯೇ ಇಷ್ಟೇಕೆ ಹೀಗೆ ಅವಸರ ಮಾಡುವೆ ?

**ಸಪ್ತ**ಮಿ—ನಾನು ಹೋಗುವೆನಮ್ಮ. ಬಂದು ಬಹಳ ಹೊತ್ತಾಯಿತು. ನಾವು ಎರಡನೆಯವರ ಮನೆಯಲ್ಲಿ ಕೆಲಸಮಾಡತಕ್ಕವರು-ಏನನ್ನುವರೋ ಏನೋ ! ಆದರೆ ಪ್ರತಿಪದೆ ನಾನು ಮೇಲಿಂದ ಮೇಲೆ ನಿನ್ನ ಭೇಟಿಗೆ ಬರಬೇಕು. ನೀನು ನನ್ನ ಭೇಟಿಗೆ ಒಂದುಸಲವಾದರೂ ಬರಬಾರದೋ?

**ಪ್ರತಿಪದೆ**—ಏನು ನಾನು ನಿನ್ನ ಭೇಟಿಗೆ ಬರಬೇಕೇ ! ಅಮ್ಮಾ ನಾನು ಅಂತಹ ಪುಣ್ಯಶಾಲಿಯೇ. ನನ್ನ ಧಣಿಯಳು ಕೆಟ್ಟವಳು. ನನಗೆ ಈಚೆ ಯಿಂದ ಆಚೆಗೆ ನೋಡುವಷ್ಟು ಅವಕಾಶವು ದೊರೆಯುವುದಿಲ್ಲ. ಇದನ್ನು ಮಾಡು. ಅದನ್ನು ಮಾಡು ಎಂದು ಒಂದೇ ಸಮನೆ ನನ್ನ ಬೆನ್ನು ಹಿಂದೆ ಸುಳಿದಾಡುತ್ತಾಳೆ. ನನಗಂತೂ ಈ ಜನ್ಮವೇ ಬೇಸರವಾಗಿದೆ.

**ಸಪ್ತಮಿ**—ಹಾಗಾದರೆ ಏತಕ್ಕೆ ಇಂಥವರ ಮನೆಯಲ್ಲಿ ಕೆಲಸಮಾಡುವಿಯೇ ? ಎಲ್ಲಿಯಾದರೂ ಕೆಲಸಮಾಡುವುದೇ ನಿಜವಾದ ಮೇಲೆ, ಈ ಮನೆ ಯಲ್ಲದಿದ್ದರೆ ಎರಡನೇ ಮನೆ. ನಮಗೇನು ?

**ಪ್ರತಿಪದೆ**—ಅದೇನೋ ನಿಜ. ನಮ್ಮ ಸಮಯಕ್ಕೆ ಮತ್ತೊಂದು ಮನೆ ಸಿಗಬೇಕಲ್ಲವೇ ? ನಿನ್ನಂತಹ ಧಣಿಯಳು ನನಗೆ ದೊರೆತರೆ ನಾನು ಈಗಲೇ ಬಿಡುವದಕ್ಕೆ ಸಿದ್ಧಳಿದ್ದೇನೆ. ಏನೆ ಈ ಸೀರೆಯನ್ನು ನಿನಗೆ ನಿನ್ನ ಧಣಿಯಳೇ ಕೊಟ್ಟಳೋ—ಇನ್ನೂ ಹೊಸದಾಗಿಯೇ ಇರುವುದು.

**ಸಪ್ತಮಿ**—ಹೌದು ಅವರೇ ಕೊಟ್ಟರು. ಈ ಶೀರೆಯನ್ನು ಅವರು ಸರಿಯಾಗಿ ಒಂದು ತಿಂಗಳು ಕೂಡಾ ಉಟ್ಟುಕೊಳ್ಳಲಿಲ್ಲ. ನನ್ನ ಮೇಲೆ ಅವರದು ತುಂಬಾ ಪ್ರೀತಿ ಇರುವುದು. ನನಗೆ ಅವರು ಮೇಲಿಂದ ಮೇಲೆ ಶೀರೆ ರೌಕೆಗಳನ್ನು ಕೊಡುವರು. ತಮ್ಮ ಮನೆಯಲ್ಲಿ ಕೆಲಸ ಮಾಡುವವರು ಚೆನ್ನಾಗಿ ಕಾಣಿಸಬೇಕೆಂದು ಈ ಮೂಗುಬಟ್ಟನ್ನು ಸಹ ಅವರೇ ನನಗೆ ಕೊಟ್ಟರು. ನಿನಗೆ ಈ ರೀತಿಯಾಗಿ ಏನಾದರೂ ದೊರೆಯುವುದೇ ?

**ಪ್ರತಿಪದೆ**—ಅಮ್ಮನವರ ಸೀರೆಯ ಮೇಲೆ. ಒಬ್ಬರದೇ ಇಬ್ಬರದೇ, ಹತ್ತು ಜನರ ಕಣ್ಣು. ನನ್ನ ಅದೃಷ್ಟಕ್ಕೆಲ್ಲಿ ದೊರೆಯುವುದು !

( ಪೂರ್ಣಿಮಾ ದೇವಿಯವರು ಬರುವರು )

**ಪೂರ್ಣಿಮಾ**—ಏನೇ ಶಿಟವಿಯೇ-ಎಷ್ಟೋ ಸಲ ಕೂಗಿದೆ. ಬಾಗಿಲು ತಟ್ಟಿದೆ. ನಿನ್ನ ಕಿವಿಗಳು ಹಾಳಾಗಿ ಹೋಗಿದ್ದವೇ ? ಏನಾಗಿತ್ತೇ ನಿನಗೆ ಬಾಗಿಲು ತೆರೆಯಲಿಕ್ಕೆ ?

**ಪ್ರತಿಪದೆ**—ದೇವೀ-ಕೂಗುವುದು ಕೇಳಿದ ಕೂಡಲೇ ಬೇಗನೆ ಒಂದು ಬಾಗಿಲು ತೆರೆದೆನು. ಆದರೆ ಇಲ್ಲಿ ಯಾರೂ ಕಾಣಿಸಲಿಲ್ಲ.

**ಪೂರ್ಣಿಮಾ**—(ಆಶ್ಚರ್ಯದಿಂದ ಸಪ್ತಮಿಯ ಕಡೆಗೆ ನೋಡಿ) ಇವಳಾರು ? ಏನೇ ಇಲ್ಲಿ ಬರುವುದಕ್ಕೆ ನಿನ್ನದೇನು ಕೆಲಸ ಇಲ್ಲಿ ?

**ಸಪ್ತಮಿ**—(ಗಾಬರಿಯಿಂದ) ನನ್ನ-ನನ್ನ ಕೆಲಸವೇ ? ನನ್ನದೇನು ಕೆಲಸ !

**ಪೂರ್ಣಿಮಾ**—ಹೀಗೇಕೆ ತೊಂದರೆಯಲ್ಲಿ ಬೀಳುವೆ ? ಸ್ಪಷ್ಟವಾಗಿ ಹೇಳು. ನಮ್ಮ ಯಜಮಾನರ ಕಡೆಗೆ ನಿನ್ನದೇನು ಕೆಲಸ ? ಏನಾದರೂ ಹೊಟ್ಟೆಶೂಲಿಯ ಔಷಧ ಬೇಕಿತ್ತೋ? ಆ ! ಹೇಗೆ ?

**ಸಪ್ತಮಿ**—ನಿಮ್ಮ ಯಜಮಾನರ ಹತ್ತಿರ ನನ್ನದೇನು ಕೆಲಸ ? ನಾನೇಕೆ ಬರಲಿ ?

**ಪೂರ್ಣಿಮಾ**—ಏತಕ್ಕೆ ಬರಲಿ ? ಅದನ್ನು ನಿನ್ನ ಮನಸ್ಸಿಗೇ ವಿಚಾರಿಸು. ಏನೇ ಪ್ರತಿಪದೆ ಇವಳಿಗೆ ನಿನ್ನ ಕಡೆಯಿಂದ ಸಹಾಯವೇ? ಬೇಷ್ ಒಳ್ಳೇನಂಬಿಗಸ್ತಳು !

**ಪ್ರತಿಪದೆ**—ದೇವೀ-ತಾವು ಹೀಗೇಕೆ ಮಾತನಾಡುವಿರಿ? ನಾನು ಅಂತಹ ನೀಚ ಕೆಲಸ ಮಾಡತಕ್ಕ ಸ್ತ್ರೀಯಲ್ಲ! ಈ ಬಡ ಪ್ರಾಣಿಯು ನಮ್ಮ ಊರವಳು. ಇವಳು ಇಲ್ಲಿಯ ಶ್ರವಣಶೇಟರ ಹೆಂಡತಿಯಾದ ಭರಣೀ ದೇವಿಯವರ ದಾಸಿಯು. ಸಹಜವಾಗಿ ನನಗೆ ಭೇಟಿಯಾಗುವುದಕ್ಕೆ ಬಂದಿದ್ದಳು. ಇವಳು ಒಳ್ಳೆಯ ಸ್ವಭಾವದವಳು. ಸಾತ್ವಿಕಳು.

**ಪೂರ್ಣಿಮ**—ಹೌದು-ಹೌದು-ಸಾತ್ವಿಕಳೇ ಹೌದು! ನಮ್ಮ ಯಜಮಾನರ ಕಡೆಗೆ ಔಷಧ ಬೇಡುವುದಕ್ಕೆ ಇಂತಹ ಸಾತ್ವಿಕರೇ ಬರುತ್ತಾರೆ. (ಸಪ್ತಮಿಗೆ) ಏನೆ ನಿನಗೆ ಇಂತಹ ಶೀರೆಯನ್ನು ಯಾರು ಕೊಟ್ಟರು?

**ಸಪ್ತಮಿ**—ನನಗೆ ನಮ್ಮ ಭರಣೀದೇವಿಯುವರೇ ಕೊಟ್ಟರು!

**ಪೂರ್ಣಿಮ**— (ಅಣಕಿಸಿ) ಹೂ ಕೊಡುತ್ತಾರೆ. ಭರಣೀದೇವಿಯವರು! ಇಂತಹ ಶೀರೆಯನ್ನು ಯಾಕೆ ಕೊಟ್ಟರು? ಯಾವಾಗ್ಗೆ ಕೊಟ್ಟರು? ಯಾರು ಕೊಟ್ಟರು? ಇವೆಲ್ಲವೂ ನನಗೆ ಚೆನ್ನಾಗಿ ತಿಳಿದುಹೋಗಿದೆ. ಇನ್ನೊಮ್ಮೆ ನಮ್ಮ ಮನೆಗೆ ಬಂದರೆ ತೋರಿಸುತ್ತೇನೆ! ನಡೆ ಹೊರಡು! (ಸಪ್ತಮಿಯು ಹೋಗುವಳು ಪ್ರತಿಪದೆಗೆ) ನೋಡಿದೆಯಾ ಇವಳ ಡೌಲು, ಚನುಕು ಹೇಗಿದೆ? ಇವಳು ಸಾತ್ವಿಕಳೇ? ಪ್ರತಿಪದೆ-ಇವಳಿಗೆ ಭರಣೀ ದೇವಿಯು ಶೀರೆಯನ್ನು ಕೊಟ್ಟಳೋ ಅಥವಾ ನಮ್ಮ ಯಜಮಾನರು ಕೊಟ್ಟರೋ ಸತ್ಯವಾಗಿ ಹೇಳು! ಹೇಳುವದಿಲ್ಲವೇ? ಒಳ್ಳೇದು, ಭರಣೀ ದೇವಿಯ ಪರಿಚಯು ನನಗೆ ಚನ್ನಾಗಿದೆ. ನಾನು ಈಗಿಂದೀಗಲೇ ಹೋಗಿ ಅವಳಿಗೆ ಒಂದು ಕಾಗದ ಬರೆಯುತ್ತೇನೆ. (ಪ್ರತಿಪದೆಗೆ) ಇವರು ಎಲ್ಲಿ? ಎಲ್ಲಿ ಹೋಗಿರುವರೇ?

**ಪ್ರತಿಪದೆ**—ದೇವೀ–ಎಲ್ಲಿಯೋ ಹೊರಗೆ ಹೋಗಿರುವರು.

**ಪೂರ್ಣಿಮಾ**—ಹೊರಗೆ ಹೋಗಿರುವರೇ? ಯಾವಾಗ್ಗೆ ಹೋದರು? ಏಕೆ ಹೋದರು?

**ಪ್ರತಿಪದೆ**—ದೇವಿಯುವರೇ ನಿಜವಾಗಿಯೂ ನನಗೆ ಗೊತ್ತಿಲ್ಲ.

**ಪೂರ್ಣಿಮಾ**—ಹೇಳು. ಹೇಳು. ಬೇಕಾದಷ್ಟು ಸುಳ್ಳು ಹೇಳು. ನಾನಂತು ಇದರ ಗುಟ್ಟು ತಿಳಿಯದ ವಿನಹ ಅನ್ನವನ್ನೇ ಸೇವಿಸುವದಿಲ್ಲಾ. ನಾನು ಈಗಲೇ ಹೋಗಿ ಭರಣೀದೇವಿಯವರಿಗೆ ಕಾಗದ ಬರೆಯುತ್ತೇನೆ. ನೀನು ಹೋಗು ಮತ್ತು ಆ ವೃಶ್ಚಿಕನನ್ನು ಕಳುಹಿಸಿಕೊಡು—ಅಯ್ಯೊ ಏನು ನನ್ನ ದುರ್ದೆಶೆ ಮಾಡುತ್ತಿರುವರು ! ದೇವರೇ ನಿನಗೆ ಕಣ್ಣಿಲ್ಲವೆ ?

## ೪ ನೇ ಪ್ರವೇಶ

(ವಿಜಯರಾಯರ ಮನೆಯ ಹಿಂಭಾಗದ ರಸ್ತೆ. ಶತತಾರೆಯು ಒಂದು ಬದಿಯಿಂದ ಬರುತ್ತಾಳೆ. ಇನ್ನೊಂದು ಬದಿಯಿಂದ ವಿಜಯರಾಯರು ಬರುತ್ತಾರೆ.)

**ಶತತಾರಾ**—ಹೇಗೆ ಮನೆಗೆ ತಲಪುವೆನೋ ಕಾಣೆ ! ಮೊದಲೇ ಉಪವಾಸ, ಅದರಲ್ಲಿ ಈ ಉರಿಬಿಸಿಲಿನ ತಾಪ ಬೇರೆ ! ದೇಹವು ತಳಮಳಿಸಿ ಹೋಗಿದೆ. ಅಮ್ಮಾ-ಅಮ್ಮಾ–(ತಲೆ ತಿರುಗುತ್ತಿರುವಂತೆ ಮಾಡುತ್ತಾಳೆ)

**ವಿಜಯ (ಸ್ವ)**—ಎಷ್ಟು-ಹುಡುಕಿದರೂ ಅವಳು ಸಿಕ್ಕಲೇಯಿಲ್ಲಾ ! ದೇವಾಲಯದಲ್ಲಿ ನೋಡಿದೆ ! ಉಪವನದಲ್ಲಿ ನೋಡಿದೆ ! ಎಲ್ಲಿಯೂ ಅವಳ ಸುಳಿವೇ ಇಲ್ಲಾ ! ಇನ್ನು ಮೇಲೆ ಮನೆಗೇ ಹೋಗೋಣ ! ಎಲ ಇವಳಾರು ? ಮತ್ತು ಹೀಗೇಕೆ ಮಾಡುತ್ತಿದ್ದಾಳೆ ?

**ಶತತಾರಾ**—ಅಮ್ಮಯ್ಯಾ ಬಿದ್ದೆನಮ್ಮಾ-ಬಿದ್ದೆನು. ಯಾರಾದರೂ ಬನ್ನಿರಿ-ಬನ್ನಿರಿ.

**ವಿಜಯ**—ಹಾ ಬಂದೆ-ಬಂದೆ ಘಾಬರಿಯಾಗಬೇಡ ! (ಉಪಚರಿಸಿ) ಯಾವಳೋ ಏನೋ ಯಾರಿಗೆ ಗೊತ್ತು ? ಸಮಯವು ಚನ್ನಾಗಿತ್ತು. ಇಲ್ಲದಿದ್ದರೆ, ಈ ಕಲ್ಲಿನ ಹೊಡೆತಕ್ಕೆ ಕೆನ್ನೆ ಒಡೆದು, ಪ್ರಾಣವೇ ಹೋಗುತ್ತಿತ್ತು.

(ಪೂರ್ಣಿಮಾ ದೇವಿಯವರು ಕಿಟಕಿಯಿಂದ ನೋಡುತ್ತಾರೆ)

**ಪೂರ್ಣಿಮಾ**—ನಾಯಿಯು ಯಾಕೆ ಬೊಗಳುತ್ತದೆ ? ಅವೊ ಆ ಮರದಡಿಯಲ್ಲಿ ಯಾರು ? ನಮ್ಮ ಮನೆಯವರ ಸವಾರಿಯಂತೆ ಕಾಣುತ್ತಲಿದೆ ! ಅಲ್ಲಿ ಕುಳಿತುಕೊಂಡು ಏನು ನಡೆಸಿದ್ದಾರೆ ! ಅಮ್ಮಯ್ಯಾ ಅವರ ಹೆಗಲ

ಮೋಸ ಯಾರು ಕೈಹಾಕಿದ್ದಾರೆ! ಅಮ್ಮಯ್ಯಾ, ಈ ಪುರುಷರು ತೀರಾ ಮರ್ಯಾದೆ ಬಿಟ್ಟವರು. ಹಗಲು ಮನೆಯಮುಂದೆ (ದಿಟ್ಟಿಸಿ ನೋಡಿ) ಮಧ್ಯದಲ್ಲಿ ಈ ಸುಟ್ಟ ಮರದ ಕೊಂಬೆಯೊಂದು ಅಡ್ಡವಾಗಿದೆ. ಚನ್ನಾಗಿ ಕಾಣಿಸುವದಿಲ್ಲಾ!

**ವಿಜಯ**—(ಶತತಾರೆಯ ಕೆನ್ನೆಗಳನ್ನು ಒರಿಸುತ್ತ) ಎಷ್ಟು ಬೆವತಿದ್ದಾಳೆ ಪಾಪ!

**ಪೂರ್ಣಿಮಾ**—ಅಯ್ಯೋ ದೇವರೇ—ಇದನ್ನು ನಾನು ನೋಡುವದಕ್ಕಿಂತಲೂ ಕುರುಡಿಯಾಗಿದ್ದರೇ ಲೇಸಾಗುತ್ತಿತ್ತು! ಹಾಸಿಗೆಯಲ್ಲಿ ನಾನು ನಿದ್ದೆ ಹತ್ತಿ ಮಲಗಿದಾಗ ಹೊದ್ದಿಕೆಯು ಕೆಳಗೆ ಬಿದ್ದಿದ್ದರೆ ಹೊಚ್ಚುವ ಇವರು, ಈ ಶಟವಿಯ ಬೆವರು ಒರಿಸುವದಕ್ಕೇ—ಶರಗು ಹಾಸುವದಕ್ಕೆ, ಮತ್ತು ಅವಳ ಮೈ ಕೈ ಮುಟ್ಟಿ ಎಬ್ಬಿಸುವದಕ್ಕೆ, ಇವರಿಗೆ ಹೇಗೆ ನಾಚಿಕೆಯಾಗುವುದಿಲ್ಲವೋ ಕಾಣೆ!

**ವಿಜಯ**—(ಅವಳ ಕಿವಿಯ ಹತ್ತಿರ ಬಗ್ಗಿ) ಯಾಕೆ ಎಚ್ಚರವಾದಿಯಾ?

**ಪೂರ್ಣಿಮಾದೇವಿ**—ಇನ್ನೇನು ನೋಡಬೇಕಮ್ಮಾ! ಮುಖವನ್ನು ತೀರ ಅವಳ ಕೆನ್ನೆಯ ಸಮೀಪಕ್ಕೆ ಒಯ್ದಿದರು! ಜನಲಜ್ಜೆ ಇಲ್ಲದಿದ್ದರೂ ಆ ಸೂರ್ಯ ನಾರಾಯಣನ ಲಜ್ಜೆಯನ್ನಾದರೂ ಹಿಡಿಯಿರಿ!

**ಶತತಾರೆ**—(ಭ್ರಾಂತಿಯಲ್ಲಿ) ಇದೇನು? ಬೀದಿಯಲ್ಲಿಯೋ ಹುಡುಗಾಟ!

**ಪೂರ್ಣಿಮಾ**—ಕೇಳಿ ಕೇಳಿ. ನಿಮಗೆ ಬುದ್ಧಿ ಇಲ್ಲದಿದ್ದರೂ ಅವಳಿಂದಲಾದರೂ ಬುದ್ಧಿ ಕಲಿಯಿರಿ!

**ವಿಜಯ**—ನಮ್ಮ ಮನೆಗೆ ಬರುವಿಯಾ? ಅಂದರೆ ಸ್ವಲ್ಪ ತಡೆದು ನಾನು ನಿನ್ನನ್ನು ನಿನ್ನ ಮನೆಗೆ ತಲುಪಿಸುತ್ತೇನೆ.

**ಪೂರ್ಣಿಮಾ**—ಏನು ನನ್ನ ಮನೆಗೇ, ಬರಲಿ ಶಟವಿಯು! ಹೇಗೆ ಬರುವಳೋ ನೋಡುತ್ತೇನೆ. ಅವಳ ದುರ್ದಶೆಯನ್ನೆ ನಾನು ಮಾಡದಿದ್ದರೆ ನನ್ನ ಹೆಸರು ಪೂರ್ಣಿಮೆಯೇ ಅಲ್ಲಾ! ಮನೆಯಲ್ಲಿ ಕಾಲಿಟ್ಟಕೂಡಲೇ ನಖಗಳಿಂದ ಅವಳ ಮುಖವನ್ನೇ ಹರಿದು ಚಲ್ಲುತ್ತೇನೆ! (ಅಣಕಿಸುತ್ತಾ) ಅಂತೆ ಮನೆಗೆ ಬರುವೆಯಾ! ಬೆಂಕಿ ಹಚ್ಚಲಿ ಈ ಪುರುಷರ

ಪೌರುಷತ್ವಕ್ಕೆ ! ಸ್ವಲ್ಪ ತಡೆಯಿರಿ—ನಾನೇ ಬಂದು ನಿಮಗೆ ಉತ್ತರ ಕೊಡುತ್ತೇನೆ.

**ವಿಜಯ**—ನಿನ್ನ ಮನೆಯು ಎಲ್ಲಿದೆ ? ನಿನ್ನ ಹೆಸರೇನು ? ನೀನು ಯಾರ ಮಗಳು ?

**ಶತತಾರೆ**—ನನ್ನ ಮನೆ ಚಾಮರಾಜ ಪೇಟೆಯಲ್ಲಿದೆ. ನಾನು ಧನಿಷ್ಠಾ-ನಾಯಕಸಾನಿಯ ಮಗಳು. (ವಿಜಯರಾಯರು ಬೆಚ್ಚಿ ಬೀಳುವರು) ನನ್ನ ಹೆಸರು ಶತತಾರೆಯು. ಇಂದು ಸೋಮವಾರ! ಬೆಳಿಗ್ಗೆ ಮೈ ತೊಳೆದುಕೊಂಡು ಕಾರ್ತೀಕನಾಥನ ದರ್ಶನಕ್ಕೆ ಹೋಗಿದ್ದೆ. ಪ್ರದಕ್ಷಿಣೆ ನಮಸ್ಕಾರ ತೀರಿಸಿಕೊಂಡು ಈಗ ತಿರುಗಿ ಬರುತ್ತಿದ್ದೆನು ! ಎರಡು ದಿನಗಳಿಂದ ಸ್ವಲ್ಪ ಪಿತ್ಥವಾಗಿತ್ತು. ಅದರಲ್ಲಿ ಈ ಬಿಸಿಲಿನ ತಾಪದಿಂದ ಕಣ್ಣುಗಳಿಗೆ ಕತ್ತಲು ಕವಿವಂತಾಗಿ ಮೂರ್ಛೆ ಬಂತು. ತಾವು ಸಮೀಪದಲ್ಲಿದ್ದಿರೆಂದು ನೆಟ್ಟಗಾಯಿತು.

**ವಿಜಯ**—ನನ್ನ ಮನೆಗೆ ಬಂದು ಸ್ವಲ್ಪ ನೆಲ್ಲಿಕಾಯಿ ಮೊರಬ್ಬಾ ತಿನ್ನುವಿಯಾ ? ಅಂದರೆ ನಿನಗೆ ಸಮಾಧಾನವೆನಿಸುವದು. ಅಥವಾ ಅದೂ ಬೇಡವಾಗಿದ್ದರೆ, ಹಾಲಿನಲ್ಲಿ ಒಂದು ಮಾತ್ರೆಯನ್ನು ತೇಯ್ದು ಕೊಡುವೆನು.

**ಶತತಾರೆ**—ಬೇಡವೆನ್ನುವದಕ್ಕೆ ಮನಸ್ಸಾಗುವುದಿಲ್ಲಾ. ಆದರೆ ಪೂಜೆಯು ತೀರುವವರೆಗೆ ನಾನು ಮುಖದಲ್ಲಿ ನೀರು ಹಾಕುವದಿಲ್ಲಾ ! ಮನೆಯು ತೀರ ಸಮೀಪವಿದೆ. ಹೀಗೆ ಮೆಲ್ಲನೇ ಹೋಗುತ್ತೇನೆ. (ಉಭಯತರೂ ಹೋಗುತ್ತಾರೆ. ಪೂರ್ಣಿಮೆಯು ಕುಂಟುತ್ತಾ ಬರುತ್ತಾಳೆ.)

**ಪೂರ್ಣಿಮಾ**—ಅಮ್ಮಯ್ಯಾ ಉಪ್ಪರಿಗೆಯಿಂದ ಇಳಿಯುವಾಗ ಎಡವಿ, ಬೊಟ್ಟಿಗೆ ಪೆಟ್ಟು ಬಡಿದು, ಕಣ್ಣಿನಲ್ಲಿ ದೀಪ ಹಚ್ಚಿದ ಹಾಗಾಯಿತು. ಹೋಗಲಿ ಅದೇನು ಮಾಡೀತು. ಆದರೆ ಮರಹಡಿಯಲ್ಲಿ ಯಾರೂ ಕಾಣಿಸುವುದಿಲ್ಲವಲ್ಲಾ ! ಮನೆಯಲ್ಲಿಯೋ ಹೋದರೋ ಹೇಗೆ ! ಅಲ್ಲಿ ಯಾರು ಹೋಗುತ್ತಿರುವರು ? (ನೋಡಿದಂತೆ ಮಾಡಿ) ಹಾಗಾದರೆ ನಮ್ಮ ಸವಾರಿಯು ಎಲ್ಲಿ ಹೋದರು ! ಪ್ರತಿಪದೆ-ಪ್ರತಿಪದೆ, ಇವಳಾದರೂ ಎಲ್ಲಿ ಹೋದಳೋ ಏನೋ ! [ಪ್ರತಿಪದೆಯು ಬರುವಳು] ಏನೆ ಇವರು ಎಲ್ಲಿ ಇರುವರೇ ?

**ಪ್ರತಿಪದೆ**—ಅಮ್ಮನವರೆ ನಾನೇನು ಬಲ್ಲೆ !

**ಪೂರ್ಣಿಮಾ**—ಈಗ ಇಷ್ಟರಲ್ಲಿಯೇ ಮನೆಯೊಳಗೆ ಹೋಗಲಿಲ್ಲವೆ ?

**ಪ್ರತಿಪದೆ**—ಇಲ್ಲ ದೇವಿಯವರೆ, ನಾನು ನಡುಮನೆಯಲ್ಲಿಯೇ ಇದ್ದೆನು.

**ಪೂರ್ಣಿಮಾ**—ಹೇಳು. ಹೇಳು. ಸುಳ್ಳು ಹೇಳು. ಬೇಕಾದಷ್ಟು ಹೇಳು ! ಸತ್ಯ ಮಾತಾಡಿದರೆ ನಿನ್ನ ನಾಲಗೆಯೇ ಕಳಚಿಬಿದ್ದೀತು. ಚಂಡಾಲಿಯೇ ನಮ್ಮ ದಂಪತಿಗಳ ಮನಸ್ಸು ಕೆಡಿಸಬೇಕೆಂದು ಮಾಡಿರುವಿಯಾ ? ನೀನು ಇಲ್ಲವೆಂದು ಹೇಳಿದರೆ ನಾನು ಒಪ್ಪುವೆನೇ ! ಬೀದಿಬೀದಿಗಳಲ್ಲಿ ಹುಡುಕಿ ಅವರನ್ನು ಕರೆದು ತರುವೆನು. (ಹೋಗುವಾಗ ಮತ್ತೆ ಎಡವುವಳು) ಅಮ್ಮಯ್ಯಾ ಸತ್ತೆನು ಸತ್ತೆನು. ಮೇಲಿಂದ ಮೇಲೆ ಅದೇ ಬೆರಳಿಗೆ ಪೆಟ್ಟು ತಗಲುವದು. (ಕೆಳಗೆ ನೋಡುವಾಗ ಭಾವಚಿತ್ರವು ಕಾಣುವದು.) ಇದೇನು ಭಾವಚಿತ್ರವು ! ಅವಳದೆ ಆಗಿರಬಹುದು. ಒಳ್ಳೆ ಸೊಗಸಾದ ಕೆಲಸವಾಯಿತು. ಇನ್ನು ಆ ಹುಚ್ಚು ಮುಂಡಿಯು ಎಲ್ಲಿದ್ದರೂ ಶೋಧಿಸಿ ನೋಡುವೆನು. ಆದರೆ ಮೊದಲು ಇವರ ಸಮಾಚಾರ ತೆಗೆದುಕೊಳ್ಳೋಣ. ಈ ದಿವಸ ಹೀಗೆ ಮಾಡಿದರು. ನಾಳೆ ಯಾವಳಾದರೊಬ್ಬ ಕಟಿಪಿಯನ್ನು ತಂದು ನನ್ನ ಎದೆಯ ಮೇಲೆ ಕುಣಿಸಲಿಕ್ಕೆ ಹಚ್ಚಿದರೆ, ಮಾಡುವದೇನು ? ಪತಿಗಳು ಪತಿಗಳು. ಇವರೆಲ್ಲಿಯ ಕತ್ತೆ ಪತಿಗಳೋ ಕಾಣೆ !

## ೫ ನೆಯ ಪ್ರವೇಶ

(ವಿಜಯ ರಾಯರ ಮನೆಯ ನಡುಮನೆ. ವಿಜಯರಾಯರು ಮತ್ತು ವೃಶ್ಚಿಕರು ಬರುವರು.)

**ವಿಜಯ**—ವೃಶ್ಚಿಕಾ, ನೀನು ಕೇವಲ ಸತ್ಯ ಮಾತಾಡತಕ್ಕವನು. ಮತ್ತು ನಂಬಿಗಸ್ತನು ; ಆದ್ದರಿಂದ ಈ ದಸರಾ ಹಬ್ಬಕ್ಕೆ ನಿನ್ನ ಕೈಗೆ ಚಿನ್ನದ ಕಡಗ ಹಾಕಬೇಕೆಂದು ನನ್ನ ಅಪೇಕ್ಷೆ ಇದೆ. ನಿನಗೆ ಕಡಗವೇ ಬೇಕೆ ಅಥವಾ(ಯೋಚಿಸಿ)ಕಲಾಬತ್ತಿನ ಪೇಟಾಬೇಕೆ ? ಜರದ ಪಂಚೆ ಬೇಕೆ ? ಸದ್ಯಕ್ಕೆ ಯಾವದೂ ಬೇಡವೇ ? ಹೇಳು. ಹೇಳು. ಈಗ ಇಲ್ಲದಿದ್ದರೂ ಮುಂದಕ್ಕಾದರೂ ಮಾಡೋಣ ! ಆದರೆ ಈಗ ನೀನು ಮೆಲ್ಲಗೆ

ಹೋಗಿ ಅವಳು ಒಳಗೆ ಏನು ಮಾಡುತ್ತಾಳೋ ನೋಡಿಕೊಂಡು ಬಾ.–

**ವೃಶ್ಚಿಕ**—(ಸ್ವಗತ) ನಮ್ಮ ಧಣಿಯರಿಗೆ ಸಂತೋಷವಾಗಿ, ಮೊದಲು ಕೈಗಳಿಗೆ ಚಿನ್ನದ ಕಡಗವನ್ನು ಹಾಕಿದರು. ಕಡಗ ಹೋಗಿ ಕಲಾಬತ್ತಿನ ಪೇಟಾ ಬಂತು. ಪೇಟಾ ಹೋಗಿ ಜರದ ಪಂಚಿಯಾಯಿತು. ಕೊನೆಗೆ ಅದೂ ಹೋಯಿತು, ಇದೂ ಹೋಯಿತು. ಕೈಯಲ್ಲಿ ಟಂಗಿನ ಕರಟಿ ಬಂದಿತು. ಇದು ಒಂದು ರೀತಿ ಗುಣವೇ-ಮೈಮೇಲೆ ಇದ್ದದ್ದನ್ನು ಕಳಿದುಕೊಂಡು ಹೊರಗೆ ಹಾಕಲಿಲ್ಲ—!

**ವಿಜಯ**—ವೃಶ್ಚಿಕಾ ಏನು ಯೋಚಿಸುತ್ತಿರುವೆ? ನೀನು ಮೆಲ್ಲನೇ ಹೋಗಿ ನೋಡಿಕೊಂಡು ಬಾ! ನೀನು ಹೋಗಿ ಬರುವವರೆಗೆ, ನಿನಗೆ ಯಾವ ಬಹುಮಾನ ಕೊಡಬೇಕೆಂಬುದನ್ನು ನಿರ್ಧರಿಸುತ್ತೇನೆ.

**ವೃಶ್ಚಿಕ**—ಧಣಿಯರೇ ತಾವೇ ಇದ್ದ-ಮೇಲೆ ಬಹುಮಾನವೇತಕ್ಕೆ ಬೇಕು! ಲೆಕ್ಕಾಚಾರವಾಗಿ ಸಂಬಳ ಸಿಕ್ಕರೆ-ಅಷ್ಟೇ ಸಾಕು. ಆದರೆ ಅಮ್ಮಾ ಅವರಿಗೆ ತಲೆ ನೋವು ಹೆಚ್ಚಾಗಿದೆ!

**ವಿಜಯ**—ಹೌದಯ್ಯಾ—ಅದಕ್ಕೆಂದೇ ನಾನಾದರೂ ಅವಳ ಸಮಾಚಾರವನ್ನು ತೆಗೆದುಕೊಳ್ಳುವದಕ್ಕೆ ಹೋಗತಕ್ಕವನಿದ್ದೇನೆ. ಹೋಗು ನೋಡಿಕೊಂಡು ಬಾ—ಮತ್ತು ನಾನು ಬರುವದನ್ನು ಅವಳಿಗೆ ತಿಳಿಸಬೇಡ!

**ವೃಶ್ಚಿಕ**—ಧಣಿಯರೇ ನಾನೇತಕ್ಕೆ ಹೇಳಲಿ? (ಹೋಗುವನು)

**ವಿಜಯ**—(ಸ್ವಗತ) ಈಗ ಬೆಳಿಗ್ಗೆ ಎಲ್ಲಿ ಹೋಗಿದ್ದೆ, ಯಾರಿಗೆ ಭೇಟಿಯಾಗಿದ್ದೆ, ಏನು ಮಾತು ನಡೆದವು, ಜೊತೆಗೆ ಯಾರು ಇದ್ದರು, ಹೊಗುವದು ಎಂದು ನಿಶ್ಚಿತವಾಗಿದೆ, ಎಂದು ಹೊರಡತಕ್ಕವರು, ಹೀಗೆ ಒಂದೇ ಸಮನೆ ಫಿರಂಗಿ ಗುಂಡುಗಳಂತೆ ಪ್ರಶ್ನೆಗಳ ಮೇಲೆ ಪ್ರಶ್ನೆಗಳನ್ನು ಸೂರಿಮಾಡುವೆನು! ನನ್ನ ಮುಂದೆ ಅವಳು ಏನುತಾನೇ ಉತ್ತರ ಕೊಡುವಳು! ಉತ್ತರ ಕೊಡುವಾಗ್ಗೆ ತೊಂದರೆಯಲ್ಲಿ ಬಿದ್ದಾಳು, ಘಾಬರಿಯಾದಾಳು, ತಪ್ಪಿ ನುಡಿದಾಳು, ಆಮೇಲೇನು ಸಿಕ್ಕಳು ನನ್ನ ಕೈಯಲ್ಲಿ! ಕೊನೆಗೆ ಅವಳ ಕೈಯಿಂದಲೇ ಅವಳ ತಪ್ಪನ್ನು ಹೊರಗೆ ಹಾಕಿಸದಿದ್ದರೆ ನಾನು ವಿಜಯರಾಯನೇ ಅಲ್ಲಾ!

(ವೃಶ್ಚಿಕನು ಬರುವನು) ಏನಯ್ಯಾ ಏನು ಮಾಡುತ್ತಿರುವಳು.

**ವೃಶ್ಚಿಕ**—ಧಣಿಯರೇ ಏನೂ ಇಲ್ಲಾ. ಸುಮ್ಮನೇ ಸೋಫಾದ ಮೇಲೆ ಮಲಗಿರುವರು. ಸಮೀಪದಲ್ಲಿ ಪ್ರತಿಪದೆಯು ನಿಂತಿರುವಳು. (ಸಮೀಪಕ್ಕೆ ಬಂದು ಕಿವಿಯಲ್ಲಿ) ಏನೋ ಗುಟ್ಟಾಗಿ ಮಾತಾಡುತ್ತಿರುವರು.

**ವಿಜಯ**—ಒಳ್ಳೇದು! ನೀನು ನಿನ್ನ ಕೆಲಸಕ್ಕೆ ಹೊರಡು.

(ಪೂರ್ಣಿಮಾ ಪ್ರತಿಪದೆಯರು ಬರುವರು)

**ಪೂರ್ಣಿಮಾ**—ಏನೇ—ಎಲ್ಲಿಯ ಧರ್ಮಾರ್ಥ ಔಷಧ! ಏನು ಕಥೆ! ಇಂಥಾ ವೇಷಗಳು ನನಗೆ ತಿಳಿಯುವೇನು? ಹೆಂಗಸರ ರೋಗವನ್ನು ಹೆಂಗಸರೇ ಪರೀಕ್ಷಿಸಬೇಕು! ಪುರುಷರಿಗೇನು ತಿಳಿಯುವುದು? ಇಂಥಾ ದುರ್ವಿದ್ಯಗಳು ನಿನಗೆ ಎಂದಿಗೂ ತಿಳಿಯಲಾರವು; ಮತ್ತು ನನಗಾದರೂ ಮೊದಮೊದಲು ಎಲ್ಲಿ ತಿಳಿಯುತ್ತಿದ್ದವು, ಆದರೆ ಈಚೀಚೆಗೆ ನನ್ನ ಕಣ್ಣುಗಳು ಚೆನ್ನಾಗಿ ತೆರೆದವು. ಇವರು ಹೀಗೆ ಮಾಡುವದನ್ನು ನೋಡಿದರೆ ನನ್ನ ಹೊಟ್ಟೆ ಉರಿಯುವದು(ಕಣ್ಣೀರು ತಂದು) ನಾನೇನು ಗುಣದಿಂದ ಕೆಟ್ಟವಳೇ. ಕುರೂಪಿಯೇ, ಕಪ್ಪೇ, ಮುಪ್ಪಿನವಳೇ! ಅಲ್ಲದೆ ನನ್ನ ಮುಂದೆ ಇಂತಹ ನೀಚ ಕೆಲಸ ಮಾಡುವದಕ್ಕೆ ಇವರಿಗೆ ಹೇಗೆ ನಾಚಿಕೆಯಾಗುವುದಿಲ್ಲವೋ ಕಾಣೆ! ನಾನು ಎಲ್ಲಿಯಾದರೂ ದೇವರಿಗೆ ಹೋಗಲಿಕ್ಕೆ ಕಳ್ಳತನ, ಯಾರಾದರೂ ಆಪ್ತರಿಷ್ಟರ ಮನೆಗೆ ಹೋಗಲಿಕ್ಕೆ, ಇವರ ಪ್ರತಿಬಂಧ! ಆದರೆ ತಾವು ಮಾತ್ರ ಜನಲಜ್ಜೆಯನ್ನೂ-ಮನಲಜ್ಜೆಯನ್ನೂ ತಲೆಗೆ ಸುತ್ತಿ, ಹಗಲು, ತುಂಬಿದ ಬೀದಿಯಲ್ಲಿ ಇಂತಹ ಮುಠ್ಠಾಳತನ ಮಾಡಬೇಕೆ? ಮತ್ತು ಮೇಲೆ ಇವರೇ ಸಾತ್ವಿಕರು. ಇದನ್ನು ನಾನು ಎಲ್ಲಿಯವರೆಗೆ ಸಹಿಸಲಿ?

**ಪ್ರತಿಪದೆ**—ಅಮ್ಮನವರೇ—ನೀವು ಪ್ರತ್ಯಕ್ಷ ನೋಡಿದೆನೆಂದು ಹೇಳುವಿರಿ! ಅಂದಮೇಲೆ ನಾನೇನು ಮಾತಾಡಲಿ? ಮತ್ತು ಅವರಾದರೂ ಹೀಗೆ ಮಾಡುವದು ಯೋಗ್ಯವೇ. ಯಾಕಂದರೆ, ಪುರುಷರು ತಮ್ಮ ಶೌರ್ಯವನ್ನು, ಸ್ವತಂತ್ರತೆಯ ಅಧಿಕಾರವನ್ನೂ, ನಮ್ಮಂತಹ ಬಲಹೀನರಾದ ಅಬಲೆಯರಮೇಲಲ್ಲದೇ, ಮತ್ತಾರಮೇಲೆ ತೋರಿಸಬೇಕು.?

**ಪೂರ್ಣಿಮಾ**—ಪ್ರತಿಪದೆ ನಿಶ್ಚಯವಾಗಿ ಈರೀತಿ ಬದುಕಿರುವದಕ್ಕಿಂತಲೂ

ವಜ್ರವನ್ನು ತಿನ್ನಲೀ, ಅಥವಾ ಅಫೂ ನುಂಗಲೀ, ವಿಷವನ್ನು ಕುಡಿಯಲೀ ಇಲ್ಲವೇ ಕೆರೆಬಾವಿಗಳಲ್ಲಿ ಬಿದ್ದು ಪ್ರಾಣ ಕೊಡಲೀ, ಎಂದೆನಿಸುವದು. ಲಗ್ನವಾದ ಹೊಸದರಲ್ಲಿ ಎಷ್ಟು ಪ್ರೇಮ ಮಾಡಿದರು? ಆಗ ಪ್ರತಿಯೊಬ್ಬರು ನನಗೆ "ನೀನು ಭಾಗ್ಯಶಾಲಿಯು. ನಿನಗೆ ಒಳ್ಳೆ ಉಲ್ಲಾಸದ ಗಂಡನು ದೊರೆತನು." ಎಂದು ವರ್ಣಿಸುತ್ತಿದ್ದರು. ಆದರೆ ಇತ್ತೀಚೆಗೆ ನೋಡಿದರೆ ಎಲ್ಲವೂ ಪ್ರತಿಕೂಲವೇ! ಯಾವಾಗಲೂ ದುಮು ದುಮು ಉರಿಯುವ ಮುಖವು, ಸರಿಯಾಗಿ ಮಾತಾಡುವುದಂತೂ ಇಲ್ಲವೇ ಇಲ್ಲಾ. "ಒಡವೆಗಳನ್ನು ಏಕೆ ಧರಿಸುವೆ?" "ದೇವಾಲಯಕ್ಕೆ ಯಾಕೆ ಹೋಗುವೆ?" ಎಂದು ಯಾವಾಗಲೂ ಇವರ ವೃಪದ್ರವವಿದ್ದೇ ಇರುತ್ತದೆ!

**ಪ್ರತಿಪದೆ**—ಅಮ್ಮನವರೇ ನಾವು ಹೆಂಗಸರು, ಅದಕ್ಕೆ ನಮ್ಮದೇನು ಉಪಾಯವಿದೆ! ಅನುಭವಿಸುವದಷ್ಟೇ ನಮ್ಮ ಕೆಲಸವು!

**ಪೂರ್ಣಿಮಾ**—ಹೂ. ಅನುಭವಿಸಬೇಕೆ! ಅದೇಕೆಂದು? ಯಾವುದೋ ದೇಶದಲ್ಲಿ ಸ್ತ್ರೀಯರು ಪುರುಷರನ್ನು ಗುಲಾಮರಂತೆ ನಡೆಸುತ್ತಾರಂತಲ್ಲಾ ಹಾಗೇ ನಮ್ಮ ಮನೆಯಲ್ಲೂ ಆಗಬೇಕು, ಅಂದರೆ ಒಲೆಯ ಮುಂದೆ ಗಂಡಸರು, ಮಹಾದ್ವಾರದಲ್ಲಿ ಹೆಂಗಸರು! ಹೀಗಾಗಬೇಕು! ಅಂದರೇ ನಮ್ಮ ಪತಿರಾಜರ ಸೊಕ್ಕು ಮುರಿಯುವದು.

**ಪ್ರತಿಪದೆ**—ಅಮ್ಮನವರೇ ಹೀಗೆ ಮಾಡುವದು ಯೋಗ್ಯವೇ?

**ಪೂರ್ಣಿಮಾ**-ಏನೇ ನಾನಾದರೂ ಇದಕ್ಕೆ ಹೇಗೆ ಯೋಗ್ಯವೆಂದೇನು? ನನ್ನದು ನಿರ್ಮಲ ಮನಸ್ಸು, ಹೊಟ್ಟೆ ಉರಿದು ಮಾತಾಡುತ್ತೇನೆ! ಪುರುಷರು ಲಗ್ನದಲ್ಲಿ ತಾವೇ ಮಾಡಿದ ಪ್ರಮಾಣದಂತೆ ನಮ್ಮ ಜೊತೆಯಲ್ಲಿ ನಡೆದರೆ ಸಾಕು. ಇದಕ್ಕೂ ಹೆಚ್ಚಿಗೆ ಅವರ ಉಪಕಾರವೇನೂ ನಮಗೆ ಬೇಡ! ಹೂ! ಇನ್ನು ಸಾಕು ಈ ಕರ್ಮ ಕಥೆ; ಆದರೆ ಬೆಳಿಗ್ಗೆ ನಿನ್ನ ಹತ್ತಿರ ಬಂದವಳು ಯಾರು? ಹೇಳುವದಿಲ್ಲವೇ?

**ಪ್ರತಿಪದೆ**—ಅಮ್ಮನವರೆ ನಾನು ನಿಮ್ಮ ಮುಂದೆ ಒಂದು ಅಕ್ಷರವನ್ನಾದರೂ ಸುಳ್ಳು ಹೇಳುವದಿಲ್ಲಾ. ಅವಳು ಶ್ರವಣ ಶೇಟರ ಹೆಂಡತಿಯಾದ ಭರಣೀದೇವಿಯ ದಾಸಿಯು.

( ವಿಜಯರಾಯರು ಹಿಂದುಮಗ್ಗಲಿನಿಂದ ಬರುವರು. )

**ವಿಜಯ**—(ಸ್ವಗತ) ಇವಳು ಏನು ಹೇಳಿದಳು ?

**ಪೂರ್ಣಿಮಾ**—ಏನೆ ನೋಡೀ ಹಿಂದೆ ಮಾಡಿದ ಉಪಕಾರವನ್ನು ಸ್ಮರಿಸಿ ಸತ್ಯ ಮಾತಾಡು !

**ಪ್ರತಿಪದೆ**—ದೇವೀ ತಾವು ಹೀಗೆಂದ ಮೇಲೆ, ನಾನೇನು ಮಾತಾಡಲಿ ?

**ವಿಜಯ**—(ಸ್ವಗತ) ಓಹೋ—ಈ ವಿಷಯವು ಏನೋ ಪರಸ್ಪರವಾಗಿ ನಡೆದಿರುವದು.

**ಪೂರ್ಣಿಮಾ**—ಯಾಕೆ ಹೇಳುವದಿಲ್ಲವೇ ಬಿಡು ! ಈಗಲೇ ನನ್ನ ಪತ್ರದ ಉತ್ತರವೂ ಬರಬಹುದು ! ಇದರ ಶೋಧವನ್ನು ನಾನೇ ಮಾಡುತ್ತೇನೆ.

**ವಿಜಯ**—(ಸ್ವಗತ) ಇದರ ಶೋಧವನ್ನು ಅಂದರೆ, ಯಾವ ಶೋಧವನ್ನು ?

**ಪೂರ್ಣಿಮಾ**—ನಡಿ ನನ್ನ ಮುಂದೆ ನಿಲ್ಲಬೇಡಾ ! ಸ್ವಲ್ಪ ಪನ್ನೀರು ತೆಗೆದು ಕೊಂಡು ಬಾ ! (ಪ್ರತಿಪದೆಯು ಹೋದನಂತರ ಭಾವಚಿತ್ರವನ್ನು ಕೈಯಲ್ಲಿ ತೆಗೆದುಕೊಂಡು)

**ವಿಜಯ**—(ಸ್ವಗತ) ಇದೇನು ? ಯಾರದೋ ಭಾವಚಿತ್ರವು ! ಸಂಶಯವೇಕೆ ! ಆಗಲೇ ಇವಳು ದೇವಾಲಯಕ್ಕೆಂದು ಹೋದಾಗ ತನ್ನ ಪಿಟ ಪುರುಷನ ಭಾವಚಿತ್ರವನ್ನು ತಂದಿದ್ದಾಳೆ ! ಮೊದಲು ಇದನ್ನು ಚನ್ನಾಗಿ ನೋಡಬೇಕು !

**ಪೂರ್ಣಿಮಾ**—(ಕೈಯಿಂದ ತೋರಿಸುತ್ತಾ) ಎಷ್ಟು ಸುಂದರ ರೂಪವಿದು ! ಇಂತಹ ಪುರುಷರತ್ನವನ್ನು ಬಿಟ್ಟು, ನಮ್ಮ ಯಜಮಾನರಲ್ಲಿ ಏನು ಕಂಡು ಮೋಹಿಸಿದೆಯಮ್ಮಾ—?

**ವಿಜಯ**—(ಸ್ವಗತ) ಅವನ ಸ್ವರೂಪವನ್ನು ವರ್ಣಿಸಿ ನನ್ನನ್ನುದ್ದೇಶಿಸಿ ಕೆಟ್ಟ ಮೋರೆ ಮಾಡುವಿಯಾ ? ಇದರ ಪರ್ಯವಸಾನ ನೋಡುವೆನು.

**ಪೂರ್ಣಿಮಾ**—(ಸ್ವಗತ) ಭಾವಚಿತ್ರಕ್ಕೆ ಹಚ್ಚಿದ ಗಂಧವು ಎಷ್ಟು ಸುವಾಸನೆಯಾಗಿದೆ ! (ಅದನ್ನು ಮೂಸಿಸುವಳು)

**ವಿಜಯ**—ಯಲ ಯಲಾ, ಎಷ್ಟು ನಾಚಿಕೆ ಬಿಟ್ಟಳಿವಳು ! ಆ ಭಾವಚಿತ್ರ

ದಲ್ಲಿಯು ಕಳ್ಳನ ಚುಂಬನ ತೆಗೆದುಕೊಳ್ಳುತ್ತಾಳೆ! ಹೀಗೇ ಕೆನ್ನೆಯ ಮೇಲೆ ಒಂದು ಏಟು ಹಾಕಲೇ—! ಬೇಡಾ ಬೇಡಾ ಹೀಗೆ ಪರಟು ತನ ಉಪಯೋಗದ್ದಲ್ಲಾ! ಯುಕ್ತಿ-ಪ್ರಯುಕ್ತಿಯಿಂದಲೇ ಹೆಜ್ಜೆಗಳನ್ನು ಮುಂದಿಡೋಣ!

**ಪೂರ್ಣಿಮಾ**—(ಸ್ವಗತ) ದುರ್ದೈವಿಯೇ ಸುದೈವದಿಂದ ನಿನಗೆ ಇಂಥಾ ಸುಂದರ ಪತಿಯು ದೊರೆತಿರಲು, ಹಗಲು ರಾತ್ರಿ ಇದನ್ನು ಹೀಗೇ ಅಪ್ಪಿಕೊಂಡೇ ಇರಬೇಕು—(ಎದೆಗೆ ಅವಚಿಕೊಳ್ಳುವಳು)

**ವಿಜಯ**—(ಸ್ವಗತ) ಈಗ ಮಾತ್ರ ನಿರ್ಲಜ್ಜತನದ ಕಳಸವಾಯಿತು. ಆ ಭಾವಚಿತ್ರವನ್ನು ತೀರಾ ಎದೆಗೇ ಅವಚಿಕೊಳ್ಳುತ್ತಾಳೆ! (ಸಿಟ್ಟಿನಿಂದ) ಈ ಕಾಲಕ್ಕೆ ಇವಳನ್ನು—ಛೀ ಛೀ- ಈ ದಾಂಡಿಗ ತನವು ಏನೂ ಉಪ ಯೋಗದ್ದಲ್ಲಾ. ನಮ್ಮ ಅಸ್ತ್ರವೆಂದರೆ, ವಿಚಾರವು-! ವಿಚಾರದಿಂದ ಏನಾಗುವದೋ ಆಗಲೀ!

**ಪೂರ್ಣಿಮಾ**— (ಭಾವಚಿತ್ರವನ್ನುದ್ದೇಶಿಸಿ) ನಿನ್ನಂತಹ ಸುಂದರ ಪತಿಯು ದೊರೆಯಬೇಕಾದರೆ, ತಪಶ್ಚರ್ಯವನ್ನೇ ಮಾಡಬೇಕು! ಆ ನಮ್ಮ ಅಡವೀ ಯಜಮಾನರಿಗೇ—(ವಿಜಯರಾಯನು ಮುಂದೆ ಬಂದು ಆಕೆಯ ಕೈಯೊಳಗಿನ ಭಾವಚಿತ್ರವನ್ನು ಕಸಿದುಕೊಳ್ಳುವನು) ಅಮ್ಮಯ್ಯಾ ಯಾರಿವರು!

**ವಿಜಯ**—ಅಡವೀ ಮನುಷ್ಯನು ನಾನು—ಈ ನಿಮ್ಮ ಪ್ರೀತಿಯ ವಿಟರಾಜರ ಭೇಟಿಗೋಸ್ಕರ ಬಂದಿರುವೆನು. ಹೇಳು! ಈಗ ನೀನು ನನ್ನ ಕೈಯಲ್ಲಿ ಸಿಕ್ಕಿದೆಯೋ ಇಲ್ಲವೋ?

ಪೂರ್ಣಿಮಾ—ನಾನೆಲ್ಲಿ ಓಡಿ ಹೋಗಿದ್ದೆ? ಜನ್ಮವಿರುವವರೆಗೆ ನಿಮ್ಮ ಕೈಯ ಲ್ಲಿಯೇ ಸಿಕ್ಕಿರುವೆನು.

ವಿಜಯ—ಮೊದಲು ನಿನ್ನ ವಿಷಯವಾಗಿ ಉತ್ತರ ಕೊಡು—!

ಪೂರ್ಣಿಮಾ—ನನ್ನ ವಿಷಯವಾಗಿ ಉತ್ತರವನ್ನೇನು ಕೊಡಬೇಕು—?

ವಿಜಯ—(ಭಾವಚಿತ್ರವನ್ನು ತೋರಿಸಿ) ಇದೇನಿದು?

ಪೂರ್ಣಿಮಾ—ಇದು ನಿಮ್ಮ ನಿರ್ಲಜ್ಜತನದ ಸಾಕ್ಷಿಯು—!

ವಿಜಯ—ಏನು ನನ್ನ ನಿರ್ಲಜ್ಜತನದ ಸಾಕ್ಷಿಯೋ? ನಿನ್ನ ಮಾತೇ ಯೋಗ್ಯ.

ಹೌದು ನನ್ನದೇ ನಿರ್ಲಜ್ಜತನವು! ಒಪ್ಪಿದೆನು.

ಪೂರ್ಣಿಮಾ—ಒಪ್ಪಿಕೊಳ್ಳುವದಕ್ಕೆ ನಿನುಗೆ ನಾಚಿಕೆಯಾಗುವುದಿಲ್ಲವೇ?

ವಿಜಯ—ನಿಜವಾದ ಮಾತಿಗೆ ನಾಚಿಕೆ ಯೇತರದು! ನಿನ್ನ ಪ್ರೀತಿಯ ವಿಟ ರಾಜನ ಭಾವಚಿತ್ರವನ್ನು ತಕ್ಕೊಂಡು ಅದನ್ನು ಮುದ್ದಿಸುವದು, ಎದೆಗೆ ಅಪ್ಪಿಕೊಳ್ಳುವದು,—ನಾನು ಪ್ರತ್ಯಕ್ಷವಾಗಿ ನೋಡುತ್ತೇನೆ,– ಆದರೂ ನಿನ್ನನ್ನು ಒದೆಹಾಕಿ ಮನೆಬಿಟ್ಟು ಹೊರಗೆ ಹಾಕಲು ನನ್ನ ಮನಸ್ಸು ಒಪ್ಪುವದಿಲ್ಲಾ.- ಅಂದಮೇಲೆ ಇದು ನನ್ನದೇ ನಿರ್ಲಜ್ಜತನವಲ್ಲವೇ?

ಪೂರ್ಣಿಮಾ—ನೋಡಿದಿರಾ—ಇದು ಯಂಥಾ ನ್ಯಾಯ? ತಾವು ಮೊದಲು ಶಗಣಿ ತಿನ್ನುವದು- ಆಮೇಲೆ ಎರಡನೇಯವರ ಮುಖವನ್ನು ಮೂಸಿ ನೋಡುವದು.—

ವಿಜಯ—ಖಬರ್‌ದಾರ್ ಹೆಚ್ಚಿಗೆ ಮಾತಾಡಬೇಡಾ!

ಪೂರ್ಣಿಮಾ—ಹಾಗೆ ಆಗಲಿ! ನಾನು ಮಾತಾಡುವದೇ ಇಲ್ಲಾ, ನಡೆಯಲಿ ತಮ್ಮದೇ ನಡೆಯಲಿ, (ಚುಚ್ಚಿ ಮಾತಾಡುವಳು) ತಾವೇ ಕೇವಲ ಪಾಪರಹಿತರು! ದಿನಾಲು ತಮ್ಮ ತಟ್ಟೆ ತೊಳೆದು ಕುಡಿಯಬೇಕು! ಪರಸ್ತ್ರೀಯರು ತಮಗೆ ಮಾತೆಯ ಸಮಾನರು! ಎಂದೂ ನೀವು ಪರ ಸ್ತ್ರೀಯರನ್ನು ಕಣ್ಣೆತ್ತಿ ನೋಡಿದವರೇ ಅಲ್ಲಾ! ಇಂದಿನವರೆಗೆ ನಾನಂತೂ ಅಂತಹ ಪ್ರಕಾರವನ್ನು ನೋಡಿಯೇ ಯಿಲ್ಲಾ! ಯಿಲ್ಲಾ- ಯಿಲ್ಲಾ–ತಾವು ಕೇವಲ ಪವಿತ್ರ ವಸ್ತುವು!

ವಿಜಯ—(ಗೊಂದಲದಲ್ಲಿ ಬಿದ್ದು) ನೀನು ಅನ್ನುವದೇನು?

ಪೂರ್ಣಿಮಾ—ಅನ್ನುವದೇನು? ಯಾವುದು ನಿಜವೋ ಅದನ್ನು! ಇನ್ನೂ ಒಂದು ಗಳಿಗೆ ಸಹ ಆಗಿರಲಿಲ್ಲಾ-ತುಂಬಿದ ಬೀದಿಯಲ್ಲಿ,- ನನ್ನ ಗವಾಕ್ಷದ ಎದುರಿಗೆ,- ತಾವು ಯಾರನ್ನು ತೊಡೆಯಮೇಲೆ ಕೂಡಿಸಿಕೊಂಡು ಕುಳಿತಿದ್ದಿರಿ? ನಾನೇನು ನೋಡಲಿಲ್ಲ, ಸುಮ್ಮನೇ ಕಣ್ಣು ಮುಚ್ಚಿಕೊಂಡೇ ನಿಂತಿದ್ದೆ.

ವಿಜಯ—ಯೇನು-ಯೇನಂದೆ? ಮತ್ತೊಮ್ಮೆ ಹೇಳು.

ಪೂರ್ಣಿಮಾ—ಅವಳ ಶಿರಗು ಅಸ್ತವ್ಯಸ್ತವಾಗಿತ್ತು. ಅವಳ ದುಂಡು ದುಂಡಾದ ಕೈಗಳು ನಿಮ್ಮ ಹೆಗಲಮೇಲೆ,- ಮತ್ತು ನಿಮ್ಮ ಕೈಗಳು,

ಅವಳ ಗಲ್ಲದ ಮೇಲೆ! ಛೀ ಛೀ ಇಲ್ಲಮ್ಮಾ ನಿಜವಾಗಿಯೂ ನನಗೆ ಕಾಣಿಸಲೇ ಇಲ್ಲಾ! ಅಯ್ಯೋ ತಾವು ಏಕಪತ್ನೀವ್ರತಸ್ಥರಲ್ಲವೇ—! ಅಂದಮೇಲೆ ತಮ್ಮಿಂದ ಹೀಗೆಂದಾದರೂ ಆದೀತೆ? ಸಾಕ್ಷಾತ್ ಶ್ರೀರಾಮನ ಅವತಾರವೇ !!!

ವಿಜಯ—(ಸ್ವಗತ) ಓಹೋ ಈಗ ತಿಳಿಯಿತು. ಆಗಲೇ ನಡೆದ ಪ್ರಕಾರವನ್ನು ಇವಳು ನೋಡಿದಂತೆ ಕಾಣುತ್ತದೆ. ನಿಜವಾದ ಸಮಾಚಾರವು ಗೊತ್ತಿಲ್ಲದವರಿಗೆ ಆಗಲೇ ನಡೆದ ಘಟನೆಯು ಸ್ವಲ್ಪ ವಿರೋಧವಾಗಿ ಕಾಣುವದೇನೋ ನಿಜ; ಆದರೆ ನನ್ನ ಮನಸ್ಸಿನಲ್ಲಿ ಪಾಪದ ಲೇಶವಾದರೂ ಇರಲಿಲ್ಲಾ—

ಪೂರ್ಣಿಮಾ—ಯಾಕೆ ಸವಾರಿಯು ಬಹಳ ಗಲಾಟೆಯಲ್ಲಿ ಬಿತ್ತು! ತಮ್ಮ ಮನಸ್ಸು ತೊಳೆದ ಮುತ್ತಿನಂತೆ ಕೇವಲ ನಿರ್ಮಲ! ಆ ಕಾಲಕ್ಕೆ ತಮ್ಮ ಮನಸ್ಸಿನಲ್ಲಿ ಏನೂ ಪಾಪ ವಾಸನೆ ಇರಲಿಲ್ಲಾ. ಅಂದಮೇಲೆ ಮುಖವು ಹೀಗೇಕೆ ಕಪ್ಪಿಟ್ಟಿತು. "ನನ್ನ ಮನೆಗೆ ಬರುವಿಯಾ? ಸೊರಬ್ಬಾ ತಿನ್ನುವಿಯಾ? ಶಗಣಿ ತಿನ್ನುವಿಯಾ?" ಕರೆದುಕೊಂಡು ಬರಬೇಕಿತ್ತು ಶಟಪಿಯನ್ನು, ಅಂದರೆ ತೋರಿಸುತ್ತಿದ್ದೆ ಚಮತ್ಕಾರವನ್ನು—

ವಿಜಯ—ಪಾಪ ಆ ಹುಡುಗಿಯು ಬಿಸಿಲಿನ ತಾಪ ತಡೆಯಲಾರದೇ; ಒಮ್ಮಿಂದೊಮ್ಮೆ ಕಣ್ಣು ಕತ್ತಲೆ ಗವಿದು ಬೀದಿಯಲ್ಲಿ ಬಿದ್ದಳು.

ಪೂರ್ಣಿಮಾ—ತಿಳಿಯಿತು. ತಾವು ಬಹಳ ಕೋಮಲ ಮನಸ್ಸಿನವರಲ್ಲವೆ! ಆದ್ದರಿಂದಲೇ ತಾವು ಅವಳನ್ನು ತೊಡೆಯಮೇಲೆ ಕೂರಿಸಿಕೊಂಡು ಕುಳಿತಿದ್ದಿರಲ್ಲವೇ! ಮತ್ತು ಅವಳಿಗೆ ಕಣ್ಣುಗತ್ತಲೆ ಕವಿದಿದ್ದು ನೋಡಿ ನಿಮ್ಮ ಮನಸ್ಸು ಕಳವಳಿಸಿ, ಅವಳ ಗಲ್ಲದ ಮೇಲೆ ಹಾಗೆ ಕೈಯಾಡಿಸುತ್ತಿದ್ದಿರಲ್ಲವೆ? ನಿಜವಾಗಿಯೂ ತಮ್ಮ ಮನಸ್ಸು ಬೆಂಣೆಯಕಿಂತಲೂ ಮೃದುವಾದ್ದರಿಂದಲೇ, ತಮ್ಮ ಸೂಕ್ಷ್ಮವಾದ ತುಟಿಗಳಿಂದ ಅವಳ ಗಲ್ಲದಮೇಲಿನ ಬೆವರು ಒರಿಸುತ್ತಾ ಇದ್ದಿರೀ! ಹೀಗೆ ಅಲ್ಲವೇ.

ವಿಜಯ—(ಸ್ವಗತ) ಇವಳು ನನ್ನ ಬೆರಳನ್ನು ನನ್ನ ಕಣ್ಣಿನಲ್ಲಿಯೇ ಚುಚ್ಚಿ ಮಾತಾಡದಂತೆ ಮಾಡಿದಳು. ಇನ್ನು ಹೀಗೆ ಮಾಡಿ ಉಪಯೋಗವಿಲ್ಲ.

(ಪ್ರಕಾಶ) ಒಳ್ಳೇದು ನಡೆಯಲಿ ನಡೆಯಲಿ. ನಿನ್ನ ವಾಕ್ಚಾಪಲ್ಯವೇ ನಡೆಯಲಿ. ನಾನು ಈ ಭಾವಚಿತ್ರದ ಸಹಾಯದಿಂದಲೇ ನಿನ್ನ ಪ್ರೀತಿಯ ವಿಟರಾಜನನ್ನು ಶೋಧಿಸಿ, ಆಮೇಲೆ ನಿನಗೆ ಹೇಳುತ್ತೇನೆ. ಇದೋ ಈಗಲೇ ಈ ಕೆಲಸಕ್ಕೆ ಹೊರಟೆನು. (ಹೋಗುವನು.)

ಪೂರ್ಣಿಮಾ—ಹೋಗಿರಿ. ನಿಮ್ಮ ಈ ತರದ ಸ್ವಭಾವವನ್ನು ನಾನು ದಿನಾಲು ನೋಡುತ್ತೇನೆ. ಹೀಗೇ ಏನಾದರೂ ಕಾರಣವನ್ನು ಹುಡುಕಿ ಮನೆ ಬಿಟ್ಟುಹೋಗುವುದು. ಮನಸ್ಸಿಗೆ ಬಂದಂತೆ ಸುಖಪಡುವುದು. ದೇವರೇ ಸಾಕಾಯಿತಪ್ಪಾ ಈ ಸ್ತ್ರೀ ಜನ್ಮವು ! ಬೇಗನೇ ಮುಕ್ತ ಮಾಡು.

ವಿಜಯ—(ಪ್ರವೇಶಿಸಿ) ಯೇನೆ-ಯೋ ಹೋದಂತೆ ಕಾಣುವದು. ಒಳ್ಳೇದು ಹೋಗಲೀ ! ನೋಡಿದಿರಾ ಇದು ಜಗತ್ತಿನಲ್ಲಿ ವಿಪರೀತ ನ್ಯಾಯ ವಲ್ಲವೇ ! ನಾನೊಂದು ಮಾಡಹೋಪರೇ, ಇವಳು ಅದರ ಅರ್ಥವನ್ನು ಬೇರೆ ತಿಳಿದುಕೊಂಡಳು. ನಿಜವಾಗಿಯಾ

ರಾಗ—ಪಿಲ್ಲೂ ತಾಳ—ತ್ರಿವಟ

ದುರುಳಕಲೀ । ಕಾಲವೋ ॥ ನಿರುತರಾಹು ಶನೀಪೀಡಿಪರೂ ॥ ಪಲ್ಲ ॥
ಬಾಲೆಯ ಮೂರ್ಛಿತ ಸಮಯಸಹಾಯ ಲಲನೆಗೆ ವಿಪರೀತ । ತೋರಿತೆ ಹಾ ॥೧॥
ಮುದ್ದಿಸಿ ಅನ್ಯ । ಪುರುಷನ ಚಿತ್ರವ ॥ ಕದ್ದು ಪ್ರೀತಿಸುವ । ದೇನ್ಯಾಯ ॥ ೨ ॥

೧ ನೇ ಅಂಕ ಸಮಾಪ್ತಿ

# ೨ನೇ ಅಂಕ

## ೧ ನೇ ಪ್ರವೇಶ

ವಿಜಯರಾಯನ ಮನೆ

**ವಿಜಯ**—(ಸ್ವಗತ) ನಿನ್ನಿನ ಅರ್ಧ ದಿನವೂ ಅರ್ಧ ರಾತ್ರಿಯೂ ಶೋಧ ಮಾಡುವದರಲ್ಲಿಯೇ ಕಳೆದೆನು. ಆದರೆ ಈ ಭಾವಚಿತ್ರದಲ್ಲಿರುವ ಗೃಹಸ್ಥನ ಮುಖವೇ ನನ್ನ ದೃಷ್ಟಿಗೆ ಬೀಳಲಿಲ್ಲಾ. ವಸಂತೋದ್ಯಾನದಲ್ಲಿ ನೋಡಿದೆ. ಸಾಯಂಕಾಲ ಕಾರ್ತಿಕ ನಾಥನ ದೇವಾಲಯದಲ್ಲಿ ಕೀರ್ತನೆಯಾಗುತ್ತಿತ್ತು, ಅಲ್ಲಿಯೂ ಹೋಗಿದ್ದೆ. ಮತ್ತು ನಾನು ಎಂದೂ ಹೋಗಿರಲಿಲ್ಲಾ; ಅಂತಹ ಒಂದೆರಡು ಸಂಗೀತ ಕಚೇರಿಗಳಲ್ಲಿ ಸಹ ಹೋಗಿ ನೋಡಿದೆ, ಯಾಕಂದರೆ ಶೋಕಿ ಜನಗಳು ಸಿಗುವುದೇ ಅಂಥ ಸ್ಥಳಗಳಲ್ಲಿ! ಎಷ್ಟು ಹುಡುಕಿದರೂ ಸಿಕ್ಕಲೇ ಇಲ್ಲವಲ್ಲಾ! ಇರಲಿ. ವೃಶ್ಚಿಕನಿಂದಲೇ ಇದರ ಮರ್ಮ ತಿಳಿಯೋಣ. ಮತ್ತು ಅವನಿಂದಲೇ ಇದರ ಗುಟ್ಟು ಪರಿಹಚ್ಕೋಣ—! (ಪ್ರಗತಿ) ವೃಶ್ಚಿಕಾ-ಎಲೋ ವೃಶ್ಚಿಕಾ ಯೇನು ಮಾಡುವಿ? ಸ್ವಲ್ಪ ಈಚೆಗೆ ಬಾ—ನೋಡುವಾ—

**ವೃಶ್ಚಿಕ**—(ಬರುವನು) ಧಣಿಯರೇ ಬಂದೆನು. ಏನು ಕೆಲಸ?

**ವಿಜಯ**—ನಿನಗೆ ಒಂದು ಸೊಗಸಾದ ಪದಾರ್ಥ ತೋರಿಸುವೆನು. (ಭಾವ ಚಿತ್ರವನ್ನು ಅವನ ಕೈಯಲ್ಲಿ ಕೊಡುವನು) ಇದೋ ನೋಡು ಈ ಭಾವ ಚಿತ್ರವನ್ನು, ಹೇಗಿರುವದು?

(ಅವನ ಕಡೆಗೇ ಮರುಮರು ನೋಡುವನು. ಅವನು ಭಾವ ಚಿತ್ರವನ್ನು ನೋಡುತ್ತಿದ್ದಾನೆ)

**ವೃಶ್ಚಿಕ**—ಧಣಿಯರೇ ಬಹಳೇ-ಬಹಳ; ಬಹಳ ಸೊಗಸಾಗಿದೆ. ಎಂಥ ಸರಳ ನಾಶಿಕವಿದು, ಏನು ಕಣ್ಣುಗಳು, ಈ ಹುಬ್ಬುಗಳೋ ಧನುಷ್ಯಾಕಾರವಾಗಿ ಕೊರೆದಂತಿವೆ; ತಲೆಯ ಮೇಲಿನ ಈ ಜರದ ಪೇಟಾ, ಮುಖದ ಮೇಲಿನ ಈ ಕುಡಿಮೀಸೆ, ಕೈಯಲ್ಲಿ ಸುಂದರವಾದ ಬೆತ್ತ, ನಿಶ್ಚಯವಾಗಿಯೂ ಧಣಿಯರೇ ತಮ್ಮ ಅಂತಃಪುರದಲ್ಲಿ ಯಾವನೋ

ಒಬ್ಬ ರಾಜನು ಕುಳಿತಂತೆ ಕಾಣುತ್ತದೆ. ಹಾ ಹಾ (ವಿಜಯರಾಯನು ಬೆಚ್ಚುವನು) ಇದನ್ನು ನನಗೆ ತೋರಿಸಿದರೆ ಏನು ಉಪಯೋಗ? ಯಾವಳಾದರೂ ಸುಂದರ ಸ್ತ್ರೀಗೆ ತೋರಿಸಿದ್ದರೆ, ಅವಳು ಇವನನ್ನು ಮೋಹಿಸದೇ ಎಂದೂ ಇರುತ್ತಿರಲಿಲ್ಲಾ! (ನಗುವನು)

ವಿಜಯ—(ಸ್ವ) ಸರಿ. ಸರಿ. ಇವನು ಒಳ್ಳೇ ಅನುಭವದ ಮಾತನ್ನೇ ಹೇಳಿದನು. ಇವನನ್ನು ನೋಡಿ ಅವಳು ಮೋಹಿಸಿರಲೇ ಬೇಕು. (ಪ್ರಕಾಶ) ಅಲ್ಲೋ ನಿನಗೆ ತೋರಿಸದೇ, ಮತ್ತಾರಿಗೆ ತೋರಿಸಲಿ, ನಮ್ಮ ರಾಣೀ ಸಾಹೇಬರಿಗೆ ತೋರಿಸಲೇ?

**ವೃಶ್ಚಿಕ**—ಛೆ ಛೆ. ಸ್ವಾಮೀ ತಾವು ಹೀಗೇಕೆ ಮಾತಾಡುವಿರಿ? ಇದನ್ನು ಲಗ್ನದ ಹೆಂಡತಿಯು ನೋಡಿ ಮಾಡುವದೇನು? ಅದು ಕೆಟ್ಟದ್ದು.

ವಿಜಯ—ಅಲ್ಲೋ ಗಂಡ ಹೊರಗೆ ಹೋದಾಗ, ಒಂದು ಕ್ಷಣ ಸುಖಪಡುವದಕ್ಕೆ ಇದೊಂದು ಸಾಧನ. ಅದು ಹೋಗಲಿ ಬಿಡು. ಇವರು ಯಾರೆಂಬುದನ್ನು ನೀನೇ ಗುರ್ತು ಹಚ್ಚು ನೋಡೋಣ. ನೀನೇ ಮೊದಲು ಹೇಳು ನೋಡುವಾ! ಇವರು ನಿನ್ನ ಕೇವಲ ಗುರುತಿನವರು!

(ದೇಶಾವರೀ ನಗು ನಗುವರು)

**ವೃಶ್ಚಿಕ**—ಇವರಂತೂ ನನ್ನ ಗುರುತಿನವರಂತೆ ಕಾಣುವದಿಲ್ಲಾ, ಇಂತಹ ಮುಖ ಮುದ್ರೆಯನ್ನು ನಾನು ನೋಡುವದು ಇಂದಿನದಿವ್ಸವೇ. ಧಣಿಯರೇ ನಮ್ಮಂಥಾ ಬಡವರಿಗೆ ಇಂಥಾ ಶ್ರೀಮಂತರ ಪರಿಚಯು ಹೇಗಾಗಬೇಕು?

ವಿಜಯ—(ಸ್ವ) ಎಂಥಾ ಕಳ್ಳನಿವನು, ತೀರಾ ಹಾರಿಸಿಕೊಂಡೇ ಮಾತಾಡುತ್ತಿರುವನು! (ಪ್ರಕಾಶ) ಏ ಹುಡುಗಾ, ಇವರು ಆಗಾಗ ನಮ್ಮ ಮನೆಗೆ ಬರತಕ್ಕವರೋ, ನಮ್ಮವಳಿಗೂ ಇವರಿಗೂ ವಿಶೇಷವಾಗಿ, ತವರು ಮನೆಯ ಪರಿಚಯು!

**ವೃಶ್ಚಿಕ**—ನಾನಂತೂ ಇವರನ್ನು ಎಂದೂ ನೋಡಿಯೇ ಇಲ್ಲಾ.

**ವಿಜಯ—ಎಂದೂ ನೋಡಿಲ್ಲವೆ? ಎಂದೂ ಇವರ ಜೊತೆಗೆ ಮಾತಾಡಿಲ್ಲವೆ?**

ಮತ್ತು ಆಗಾಗ ಎಂದೂ ಅವಳಿಂದ ಪತ್ರ ತೆಗೆದುಕೊಂಡು ಹೋಗಿ ಇವರಿಗೆ ಕೊಟ್ಟಿಲ್ಲವೇ ? ಮತ್ತು ಇವಳ ಜೊತೆಗೆ ಇವರು ನಮ್ಮ ಮನೆಯಲ್ಲಿ ಸಕ್ರೆ ಪಾನಕ ಕುಡಿದದ್ದು ನೀನು ಎಂದೂ ನೋಡಿಲ್ಲವೆ ? ಬೆಳಗ್ಗೆ ರಾತ್ರಿ—ಮಧ್ಯಾಹ್ನ ಹೂ. ನೆನಪು ಮಾಡಿಕೋ—

**ವೃಶ್ಚಿಕ**—ಧಣಿಯರೇ—ನಾನೇಕೆ ಸುಳ್ಳು ಹೇಳಲಿ ನಿಮಗೆ ? ಈ ಮನುಷ್ಯ ನನ್ನು ನಾನು ಎಂದೂ ನೋಡಿಲ್ಲಾ ! ಕಾಗದವಿಲ್ಲಾ. ಪತ್ರವಿಲ್ಲಾ. ಮಾತೂ ಆಡಿಲ್ಲಾ. ಇದೋ ಈ ತಮ್ಮ ಪಾದಗಳನ್ನು ಬೇಕಾದರೆ ಮುಟ್ಟಿ ಹೇಳುತ್ತೇನೆ. ಸುಳ್ಳು ಹೇಳಿದರೆ, ಈಗಲೆ ತಮ್ಮ ಪಾದಗಳ ಮೇಲೆ ಸುಟ್ಟು ಬೂದಿಯಾದೇನು—!

**ವಿಜಯ**—ಎಲವೋ ಇಂತಹ ಆಣೆ ಕ್ರಿಯೆಗಳಿಂದ ಸುಟ್ಟು ಬೂದಿಯಾಗುತ್ತಿದ್ದರೆ, ಈ ಜಗತ್ತಿನಲ್ಲಿ ಮನುಷ್ಯರೇ ಕಾಣುತ್ತಿರಲಿಲ್ಲಾ. ಎಲ್ಲರೂ ಹೋಗುತ್ತಿದ್ದರು ಹಾಳಾಗಿ, ಅದರಲ್ಲಿ ಹೆಂಗಸರಂತೂ ತೀರಾ ನಾಮಶೇಷರಾಗಿ ಹೋಗುತ್ತಿದ್ದರು !

**ವೃಶ್ಚಿಕ**—ಧಣಿಯರೇ ಒಮ್ಮೆ ನಮ್ಮ ಗ್ರಾಮದಲ್ಲಿ ಒಬ್ಬ ಕುರುಬನು ಸುಳ್ಳಾಣೆ ಮಾಡಿದನು. ಮುಂದೆ ಸ್ವಲ್ಪ ದಿನಗಳಲ್ಲಿ ಅವನ ಕುರಿ ಹಿಂಡಿನಲ್ಲಿ ಅರ್ಧದಷ್ಟು ಕುರಿಗಳು ಪಟ ಪಟ ಸತ್ತೇ ಹೋದವು. ಇದನ್ನು ನಾನು ಕಣ್ಣಾರೆ ಕಂಡಿದ್ದೇನೆ.

**ವಿಜಯ**—ಅದು ಹೋಗಲಿ ಮೊದಲು ಇದರ ಸಮಾಚಾರವೇನಾದರೂ ನಿನಗೆ ಗೊತ್ತಿದ್ದರೆ ಹೇಳು. ನೀನು ಬೇಡಿದ್ದು ಕೊಡುವೆ. ಒಂದು ಸೊಗಸಾದ ಮನೆ ಕಟ್ಟಿಸಿಕೊಡುವೆ, ನಾಲ್ಕು ಎಕರೇ ತರಿ ಭೂಮಿ ಕೊಡುತ್ತೇನೆ. (ಹತ್ತಿರ ಕರೆದು) ಇದೋ ಅವಳು ನಿನಗೆ ಕೊಟ್ಟಿದ್ದರಕಿಂತ ಸಾವಿರ ಪಟ್ಟು ಹೆಚ್ಚು ಕೊಡುವೆನು ; ಆದರೆ ಈ ಗೃಹಸ್ಥನಾರೆಂಬುದನ್ನಷ್ಟು ಹೇಳು.

**ವೃಶ್ಚಿಕ**—ಧಣಿಯರೇ ನಿಜವಾಗಿ ಹೇಳಲೇ- ನಮ್ಮ ತಂದೆಯ ಸಾಕ್ಷಿಯಾಗಿ ಹೇಳುತ್ತೇನೆ, ಇದರೊಳಗಿನ ಒಂದು ಸಮಾಚಾರವೂ ನನಗೆ ಗೊತ್ತಿಲ್ಲ. ಇದರ ಮೇಲೆ ತಾವು ನನಗೆ ಯಾವ ಶಿಕ್ಷೆಯನ್ನಾದರೂ ಮಾಡಿರಿ.

**ವಿಜಯ**—ಒಳ್ಳೇದು. ಇರಲಿ. ನೀನು ಹೇಳಬೇಡ! ಹೊರಗೆ ಬೀಳದೆ ಇರಲಿಕ್ಕಿಲ್ಲಾ ತಿಳಿಯಿತೆ?

ರಾಗ—ಬಿಹಾಗ ತಾಳ—ತ್ರಿವಟ.

**ಕಾಣೆ ಜಗದಿ ಎನಗಾರು ಹಿತವರ! ಏನು ತಿಳಿಯದೆ ಮಂದಮತಿಯಾದೆ ॥ ಪಲ್ಲ ॥**
**ವಿಪುಲನಾರಿನರ ಗೃಹ ಪಶುಪರಿಜನ ॥ ವಿಪರೀತರಾಗೀ ॥ ಮೋಸಗೊಳಿಪರು ॥**

(ಚಾಕರನು ಬರುವನು)

**ಚಾಕರ**—ವಿಜಯರಾಯರ ಮನೆ ಇದೇ ಅಲ್ಲವೇ ಸ್ವಾಮೀ?

**ವಿಜಯ**—ಹೌದು ಇದೇ, ಅವರ ಕಡೆಗೆ ನಿನ್ನದೇನು ಕೆಲಸ?

**ಚಾಕರ**—ಕೆಲಸ ಅವರ ಕಡೆಗಿಲ್ಲಾ; ಒಳಗೆ ಅಮ್ಮನವರ ಕಡೆಗಿತ್ತು ಸ್ವಲ್ಪ ಕೆಲಸ.

**ವಿಜಯ**—(ಸ್ವಗತ) ನನಗೆ ಸ್ಪಷ್ಟವೇ ಬಿದ್ದಿತ್ತು. ನಮ್ಮ ರಾಣೀ ಸಾಹೇಬರನ್ನು ಬಿಟ್ಟು ನಮ್ಮ ಕಡೆಗೆ ಕೆಲಸವೇನೆಂದು? ಇತ್ತೀಚೆಗೆ ಯಾರದಾದರೂ ಹೆಂಗಸರ ಕಡೆಗೇ ವಿಶೇಷ ಕೆಲಸ! ಇರಲಿ ತಿಳಿಯಿತು. ನೀನು ಯಾರ ಕಡೆಯಿಂದ ಬಂದಿರುವೆ?

**ಚಾಕರ**—ಅವರು ನನಗೆ ಹೆಸರು ಹೇಳಬೇಡವೆಂದು ಅಪ್ಪಣೆ ಮಾಡಿದ್ದಾರೆ.

**ವಿಜಯ**—(ಕೈಯಲ್ಲಿ ಒಂದು ರೂಪಾಯಿ ಕೊಟ್ಟು) ತೆಗೆದುಕೋ ಇದನ್ನು ನೀನು ಹೆಸರು ಹೇಳಿದರೆ ಅದು ಅವರಿಗೆ ಹೇಗೆ ಗೊತ್ತಾಗುವುದು?

**ಚಾಕರ**—(ಸ್ವಗತ) ಇವರು ಅನ್ನುವದೂ ನಿಜವೇ. ಹೆಸರು ಹೇಳಿದರೆ, ಅವರೇನು ಇವರನ್ನು ಕೇಳಲಿಕ್ಕೆ ಬರುವರೇ? (ಪ್ರಕಾಶ) ಸ್ವಾಮೀ ರೂಪಾಯಿಯೇತಕ್ಕೆ ಬೇಕು. ಇರಲಿ—ಇರಲಿ. ತಮ್ಮ ಇಷ್ಟ. ಅಫೀಸೀ ಉದ್ಯಾನದ ಮೂಲೆಯಲ್ಲಿ ಶ್ರವಣಶೇಟರೆಂಬುವರು ವಾಸವಾಗಿದ್ದಾರೆ. ಅವರು ಈ ಪತ್ರವನ್ನು ವಿಜಯರಾಯರ ಹೆಂಡತಿಯವರ ಕೈಯಲ್ಲಿ ಕೊಡುವದಕ್ಕೆ ಹೇಳಿ ಕೊಟ್ಟಿದ್ದಾರೆ.

**ವಿಜಯ**—ಹೀಗೊ ಸರಿ ಹಾಗಾದರೆ, ನಾನೇ ವಿಜಯರಾಯನು, ಅವಳು ಹೊರಗೆ ಹೋಗಿರುವಳು. ಆ ಪತ್ರವನ್ನು ತಾ ನನ್ನ ಕೈಯಲ್ಲಿ.

**ಚಾಕರ**—ಮಹಾಸ್ವಾಮೀ—ಇದನ್ನು ಅವರ ಕೈಯಲ್ಲಿಯೇ ಕೊಡಿರೆಂದು ಅವರು ಆಜ್ಞೆ ಮಾಡಿದ್ದಾರೆ.

**ವಿಜಯ**—(ಎರಡು ರೂಪಾಯಿ ಕೊಟ್ಟು) ಇದನ್ನು ತೆಗೆದುಕೋ ವಿಜಯರಾಯರ ಹೆಂಡತಿಯ ಕೈಯಲ್ಲಿಯೇ ಕೊಟ್ಟೆನೆಂದು ಹೇಳು. ಅಂದರಾಯಿತು. ಗಂಡನ ಕೈಯಲ್ಲಿ ಕೊಟ್ಟರೇನು, ಹೆಂಡತಿಯ ಕೈಯಲ್ಲಿ ಕೊಟ್ಟರೇನು–? ಅವಳು ಹೊರಗಿನಿಂದ ಬಂದಕೂಡಲೇ ನಾನು ಅವಳ ಕೈಯಲ್ಲಿ ಕೊಡುವೆನು.

**ಚಾಕರ**—(ಸ್ವಗತ) ಇವರು ಅನ್ನುವದೂ ನಿಜವೇ ! ಹೆಂಡತಿಯು ಪತ್ರವನ್ನು ತೆಗೆದುಕೊಂಡು, ಗಂಡನು ಮಾಡುವದೇನು ? ದುಡ್ಡು ಬರುವದನ್ನು ಸುಮ್ಮನೇ ಏಕೆ ಬಿಡುವದು ? ಗೃಹಸ್ಥನು ಬಹಳೇ ಉದಾರಿಯಾಗಿರುವನು. ಒಳ್ಳೇದು ಹಾಗಾದರೆ (ರೂಪಾಯಿ ತಕ್ಕೊಂಡು) ಹಾಗಾದರೆ ಸ್ವಾಮೀ, ಈ ಪತ್ರವನ್ನು ಅವರ ಕೈಯಲ್ಲಿಯೇ ಕೊಡಬೇಕು. ನಾನು ಬರುವೆನು.

**ವಿಜಯ**—ಒಳ್ಳೇದು ಹೋಗು. ನಾನು ಅವಳ ಕೈಯಲ್ಲಿಯೇ ಕೊಡುವೆನು. ಆದರೆ ನೀನು ನಿನ್ನ ಧಣಿಗೆ ಅವರ ಕೈಯಲ್ಲಿಯೇ ಕೊಟ್ಟೆನೆಂದು ಹೇಳುವಿಯಲ್ಲವೇ ?

**ಚಾಕರ**—ಹೌದು–ಹಾಗೇ ಹೇಳುವೆನು.

**ವಿಜಯ**—(ಪತ್ರವನ್ನು ತೆರೆಯುತ್ತ) ಈ ಶ್ರವಣಸೇಟನು ಈ ಪತ್ರವನ್ನು ನನ್ನ ಹೆಂಡತಿಗೇ ಯಾಕೆ ಬರೆದನು ? ಅವನಿಗೂ ಮತ್ತು ಇವಳಿಗೂ ಯೇನು ಸಂಬಂಧ ? ಮತ್ತು ಹೆಸರು ಹೇಳಬೇಡವೆಂದು ಹೇಳಿದ್ದಕ್ಕೆ ಕಾರಣವೇನು? ಪತ್ರವು ಸರಳವಾದದ್ದಿದ್ದರೆ, ಈ ಕಳ್ಳತನವೇಕೆ? ಅಂದಮೇಲೆ ಇವರಲ್ಲಿ ಸರಳತನವೇ ಇಲ್ಲಾ ! ಇದೇ ಖಂಡಿತ ! ಇದರಲ್ಲಿ ಯೇನೋ ರಹಸ್ಯವೇ ಇದೆ ! ಹೆಂಗಸರು ಓದುಬರೆಹ ಕಲಿತರೇ, ಹೀಗೆ ಪತ್ರ ಬರೆಯುವದಕ್ಕೇ ಪ್ರಾರಂಭವಾಗುವುದು. ಚನ್ನಾಗಿದೆ ! ಇವನು ಏನು ಬರೆಯುತ್ತಾನೆ (ಕಾಗದ ಓದುವನು) ವಿನಂತಿ - ವಿಶೇಷ ನಿಮ್ಮ - ಪತ್ರವು ನನಗೆ ತಲುಪಿತು. ಸೌಭಾಗ್ಯವತಿಯನ್ನು ತೌರುಮನೆಗೆ ಕಳಿಸಿ

ದ್ದೇನೆ. ಬರಲಿಕ್ಕೆ ಇನ್ನೂ ಹದಿನೈದು ದಿನ ಬೇಕು. ಕಾರಣ, ನಾನು ನಿಮಗೆ ಬರೆಯುವದೇನೆಂದರೆ, ನೀವು ಕೇಳಿದ ಪ್ರಶ್ನೆಯ ವಿಷಯವಾಗಿ ಏನೂ ಚಿಂತೆ ಮಾಡುವ ಕಾರಣವಿಲ್ಲಾ. ಸಪ್ತಮಿ ಇವಳು ನಮ್ಮ ಮನೆಯ ನಂಬಿಗಸ್ತ ಕೆಲಸಗಿತ್ತಿಯು ; ಕಾರಣ ನಿಮ್ಮ ಮತ್ತು ನಿಮ್ಮ ಯಜಮಾನರಲ್ಲಿ ಯಾವ ತೊಂದರೆಯೂ ಬರುವ ಸಂಭವವಿಲ್ಲಾ. ಇದರ ಮೇಲಿನಿಂದ ಏನೆಂಬುದನ್ನು ತಿಳಿದುಕೊಳ್ಳಬೇಕು. ಹೆಚ್ಚಿಗೆ ಬರೆಯುವದೇನು ? — ಲೋಭವಿರಲಿ." (ಪ್ರ) ಹೆಂಡತಿಯನ್ನು ತೌರುಮನೆಗೆ ಕಳಿಸಿದ್ದೇಕೆ ? ನಮ್ಮ ರಾಣೀ ಸಾಹೇಬರೊಡನೆ ನಡೆ ಯುವ ವಿಲಾಸಕ್ಕೆ ವಿಘ್ನವಾಗುವದೆಂದು ! "ಬರಲಿಕ್ಕೆ ಇನ್ನೂ ಹದಿ ನೈದು ದಿನ ಬೇಕು." ಸರಿ. ಅಲ್ಲಿಯವರೆಗೆ ಇವರ ಸೌಖ್ಯವೇ ಸೌಖ್ಯ. ಮುಂದೇನು ಬರೆಯುವನು ? " ನೀವು ಕೇಳಿದ ಪ್ರಶ್ನೆಯ ವಿಷಯವಾಗಿ ಏನೂ ಚಿಂತೆ ಮಾಡುವ ಕಾರಣವಿಲ್ಲಾ." ಚನ್ನಾಗಿದೆ—ನೋಡುವ ರಾರು ? ತಿಳಿಯುವದಾದರೂ ಹೇಗೆ ? ಅಂದಮೇಲೆ ಪ್ರಶ್ನೆ ಯಾವು ದೆಂಬುದು ಲಕ್ಷ್ಯಕ್ಕೆ ಬಂತು. "ಮತ್ತು ಅದರ ವಿಷಯಕ್ಕೆ ಚಿಂತೆಯೇ ಬೇಡಾ.'' ಇದೂ ತಿಳಿಯಿತು. ಇರಲಿ ಮುಂದೇನು ಬರೆಯುವನು ? " ಸಪ್ತಮಿ ಇವಳು ನಂಬಿಗಸ್ತ ಕೆಲಸಗಿತ್ತಿಯು." ಓಹೋ-ಇಂದಿನ ವರೆಗೆ ಇವಳು ಇಂತಹ ಸಾವಿರಾರು ಕೆಲಸ ಮಾಡಿರಬೇಕು. ಮತ್ತು ಎಷ್ಟೋ ಇನಾಮುಗಳನ್ನು ಸಹಾ ದೊರಕಿಸಿರಬೇಕು. ಮುಂದೇನು— " ಯಾವ ತರಹದ ತೊಂದರೆಯೂ ಬರುವಂತಿಲ್ಲಾ. ಇದರ ಮೇಲಿಂದ ಏನೆಂಬುದನ್ನು ತಿಳಿದುಕೊಳ್ಳಬೇಕು." ತಿಳಿಯುವದೇನು ? ಇದೇ— ಇವಳು ದೇವರ ದರ್ಶನಕ್ಕೆ ಹೋಗುವ ನೆವ ಮಾಡಿ, ಚನ್ನಾಗಿ ನಟಿಸಿ ಕೊಂಡು ಹೊರಗೆ ಬಿದ್ದವಳು, ಮಾರ್ಗ ತಪ್ಪಿಸಿ ಕಾರ್ತಿಕನಾಥನ ಬದ ಲಾಗಿ ಶ್ರವಣಸೇಟನ ಮನೆಗೆ ಹೋಗುವದು, ಬಹಳ ಉತ್ತಮ ಹಂಚಿಕೆ. ಇನ್ನು ಮೇಲೆ ಹೋಗಲಿ ! ಈ ಪತ್ರವನ್ನು ತೆಗೆದುಕೊಂಡು ಈಗಲೇ ಶ್ರವಣಸೇಟನಿಗೆ ಭೇಟಿಯಾಗಲೇ ? (ಯೋಚಿಸಿ) ಹಾಗೆ ಬೇಡ. ನಮಗೆ ಹೀಗೆ ಅಡ್ಡದಾರಿಯಿಂದ ಹೋಗುವದೇ ಬೇಡ. ಇನ್ನು ಮೇಲೇನು? ಬೇಕಾದಷ್ಟು ಸಾಕ್ಷಿಗಳು ದೊರಕಿರುತ್ತವೆ ! ಈ ಭಾವ ಚಿತ್ರ, ಈ ಪತ್ರ,

ಸಮಾಧಾನದಿಂದ ಹುಡುಕಿದರೆ ಇನ್ನೂ ಬೇಕಾದಷ್ಟು ದೊರಕುವವು. ಹಾ-ಅಂದಮೇಲೆ ಹೀಗೆ ಮಾಡಬೇಕು ! ಈ ನಂಬಿಗಸ್ತ ಕೆಲಸಗಿತ್ತಿ ಯಾದ ಸಪ್ತಮಿಗೇ ಬೇಟಿಯಾಗಿ, ಅವಳಿಗೆ ಬೇಕಾದಷ್ಟು ಹಣದಾಶೆ ಯನ್ನು ತೋರಿಸಿ, ಅವಳನ್ನು ನಮಗೆ ಅನುಕೂಲ ಮಾಡಿಕೊಳ್ಳಬೇಕು. ಹಣವನ್ನು ನೋಡಿದ ಕೂಡಲೇ ಅವಳು ನಮಗೆ ಅನುಕೂಲವಾಗು ವುದೇ ಖಂಡಿತ ! ಆ ಮೇಲೆ ಅವಳ ಮುಖದಿಂದಲೇ ಒಂದೊಂದೇ ಸಂ ಗತಿಯನ್ನು ಹೊರತೆಗೆಯಬೇಕು. ಸರಿ ಇದೇ ಉತ್ತಮ ಉಪಾಯ ! ಎಲೋ ವೃಶ್ಚಿಕಾ—ಇತ್ತ ಬಾ—(ವೃಶ್ಚಿಕನು ಬರುವನು) ಆಗಲೇ ನೀನು ಒಳ್ಳೆ ನಿಯತಗಾರನೆಂದು ಕೊಚ್ಚಿಕೊಂಡೆಯಲ್ಲಾ ; ಈಗ ನೋಡು ತ್ತೇನೆ ನಿನ್ನ ನಿಯತ್ತನ್ನು ಒರೆಗೆ ಹಚ್ಚಿ! ಯಾಕೆ ಒಪ್ಪಿಗೆ ಇರುವದೇ—?

**ವೃಶ್ಚಿಕ**—ಧಣಿಯರೇ ನಾನೇನು ಭಯಪಡತಕ್ಕ ಮನುಷ್ಯನಲ್ಲ. ನನ್ನ ನಿಯ ತ್ತನ್ನು ಬೇಕಾದಷ್ಟು ಒರೆಹಚ್ಚಿರಿ.

**ವಿಜಯ**—ಮೊದಲು ನಿನಗೆ ಒಂದು ವಿಚಾರಿಸುತ್ತೇನೆ, ಸಪ್ತಮಿ ಯೆಂಬ ದಾಸಿ ಇರುವಳು, ನಿನಗೆ ಅವಳ ಪರಿಚಯವಿದೆಯೇ ?

**ವೃಶ್ಚಿಕ**—ಹೌದು ಧಣಿಯರೇ— ಅವಳು ಮೇಲಿಂದ ಮೇಲೆ ನಮ್ಮ ಪ್ರತಿ ಪದೆಯ ಕಡೆಗೆ ಬರುವಳು.

**ವಿಜಯ**—(ಸ್ವ) ಸಪ್ತಮಿಯು ಇವನ ಗುರ್ತಿನವಳು, ಮತ್ತು ಮೇಲಿಂದಮೇಲೆ ಪ್ರತಿಪದೆಯ ಕಡೆಗೆ ಬರುವಳು, ಸಂಪಿಧಾನವು ಒಂದಕ್ಕೊಂದು ಹೊಂ ದುತ್ತಾ ನಡೆಯಿತು (ಪ್ರ) ಒಳ್ಳೆದು ನೀನು ಹೋಗು. ಅವಳಿಗೆ ಗುಪ್ತ ರೀತಿಯಿಂದ ಭೇಟಿಯಾಗು ; ಮತ್ತೂ ಇಂದು ಸಾಯಂಕಾಲ ಮಬ್ಬು ಗತ್ತಲೆಯಾದನಂತರ ಯಾರಿಗೂ ತಿಳಿಯದಂತೆ, ನಮ್ಮ ಬಂಗಲೆಯ ಹಿಂಬದಿಯ ಮಾವಿನ ತೋಪಿನಲ್ಲಿ ಭೇಟಿಯಾಗೆಂದು ಹೇಳು.—ಈ ಕೆಲಸ ಬಹಳ ಎಚ್ಚರಿಕೆಯಿಂದಾಗಬೇಕು ತಿಳಿಯಿತೇ ?

**ವೃಶ್ಚಿಕ**—ನಿಮಗೆ ಅದರ ಚಿಂತೆಯೇ ಬೇಡ ಧಣಿಯರೇ—

**ವಿಜಯ**—ಆದರೆ ಇದು ಪ್ರತಿಪದೆಗೆ ತಿಳಿದು ಉಪಯೋಗವಿಲ್ಲಾ-ಯಾಕೆಂದರೆ, ಅವಳು ಅವಳ ಪಕ್ಷದವಳು ! ಈಗಲೇ ನಿನಗೆ ಅದನ್ನು ಹೇಳುವದು ಬೇಡಾ. ಹೋಗು-ಹೋಗು ಬೇಗನೇ ಈ ಕೆಲಸವನ್ನು ನೀನು ಮಾಡಿದ್ದೇ

ಆದರೆ ಆಗಲೇ ಹೇಳಿದಂತೆ,-ಆದರೆ ಇದೋ ನೋಡು ಈಚಿಗೆ ಬಾ,-
ಇನ್ನೂ ನಿನಗೆ ಹೇಳತಕ್ಕದ್ದಿದೆ, ಲಕ್ಷಗೊಟ್ಟು ಕೇಳು. ನಾನು ಸಪ್ತಮಿಯ
ಕೂಡ ಏಕಾಂತದಲ್ಲಿ ಕೆಲವು ಸಂಗತಿಯ ಬಗ್ಗೆ ಮಾತಾಡತಕ್ಕದ್ದಿದೆ!
ಇದೋ ಈ ವಿಷಯ ನಮ್ಮ ರಾಣೀ ಸಾಹೇಬರಿಗೆ ತಿಳಿದರೆ ಕೆಲಸವು
ಕೆಟ್ಟುಹೋಯಿತೆಂದೇ ತಿಳಿ. ಅದಕ್ಕಾಗಿಯೇ ಆ ಸಪ್ತಮಿಗೆ ತುಂಬ
ಮುಸುಕು ಹಾಕಿಕೊಂಡು ಬಾ ಎಂದು ಹೇಳು! ಮತ್ತು ನಾನು
ಹೇಳಿದ ಸ್ಥಳಕ್ಕೆ ಅವಳೊಡನೆ ನೀನು ಸಿದ್ಧನಾಗಿರು! ಮುಸುಕು ಹಾಕಿ
ಕೊಂಡು ಬರಲಿಕ್ಕೆ ಹೇಳು. ಮರೆತೀ—

**ವೃಶ್ಚಿಕ**—ಧಣಿಯರೇ ಮುಸುಕು ಹಾಕಿಕೊಂಡು ಬಂದರೆ-ಮತ್ತಷ್ಟು ಸಂಶ
ಯಕ್ಕೆ ಕಾರಣವಾಗುವದಿಲ್ಲವೆ?

**ವಿಜಯ**—ಛೆ-ಛೆ—ಇಲ್ಲಾ-ಇಲ್ಲಾ—ಅದರಲ್ಲಿಯ ರಹಸ್ಯ ನಿನಗೆ ತಿಳಿಯದು!
ಮುಸುಕು ಹಾಕಿಕೊಂಡೇ ಬರಬೇಕು. ಹೇಳಿದ್ದು ಮಾಡುವದಷ್ಟೇ
ನಿನ್ನ ಕೆಲಸ!

**ವೃಶ್ಚಿಕ**—ಒಳ್ಳೇದು ಹಾಗಾದರೆ ಅಪ್ಪಣೆಯಾದಂತೆ ಕಾರ್ಯವನ್ನು ಜರುಗಿಸಿ
ಬರುವೆನು. (ಹೋಗುವನು.)

**ವಿಜಯ**—ಹೇಗಾದರೂ ಮಾಡಿ ಇವಳ ರಹಸ್ಯವನ್ನು ಬಯಲಿಗೆ ಹಾಕಿ,
ಊರಲ್ಲೆಲ್ಲ ಇವಳ ದುರ್ದೆಶೆ ಮಾಡದಿದ್ದರೆ ನನ್ನ ಹೆಸರು ವಿಜಯ
ರಾಯನೇ ಅಲ್ಲಾ-! ಒಳ್ಳೇದು ಈಗ ಊರೊಳಗೆ ಹೋಗಿ ಒಂದು
ಸುತ್ತು ಹಾಕಿಕೊಂಡು ಬರೋಣ. ಈ ಕಳ್ಳನ ಭೇಟಿಯಾದರೆ ಬಹಳ
ಯೋಗ್ಯ. ಇಲ್ಲವಾದರೆ ಅಷ್ಟೊತ್ತು ವ್ಯಾಯಾಮ ಮಾಡಿದಂತಾಗು
ವುದು. (ಹೋಗುವನು.)

## ೨ ನೇ ಪ್ರವೇಶ

(ಬೀದಿ. ಆನಂದ ಶೇಟ ಅವನ ಗೆಳೆಯ ನಂದನಶೇಟರು ಬರುವರು)

**ನಂದನ**—ಈಗಂತೂ ಎಲ್ಲ ನಿನ್ನ ಮನಸ್ಸಿನಂತಾಗಿರುವದು; ಅಂದಮೇಲೆ
ಮುಖವು ಹೀಗೇಕೆ ಇಳಿದುಹೋಗಿದೆ? ಈಗ ನಿನಗೆ ಸೊಗಸಾದ
ವಲ್ಲಿಯೇ ದೊರೆಕಿರುವಳು, ಅಂದಮೇಲೆ ಮುಖವು ಯಾವಾಗಲೂ

ಅರಳಿದ್ದಿರಬೇಕು.

**ಆನಂದ**—(ಸ್ವಗತ) ಸೊಗಸಾದ ವಲ್ಲಿಯೇನೋ ದೊರಕಿದ್ದುದು ನಿಜ, ಆದರೆ ಆ ವಲ್ಲಿಯಿಂದ ವಿಷ ಹೊರಡುವ ಚಿನ್ಹೆ ತೋರುವದು.

**ನಂದನ**—ಯಾಕೆ ಮಾತಾಡುವದಿಲ್ಲಾ-ಬರುವ ಆನಂದದ ತೆರೆಗಳನ್ನು ಮನಸ್ಸಿನಲ್ಲಿಯೇ ನುಂಗಿ, ಮೇಲೆ-ಮೇಲೆ ನನಗೆ ಮಾತ್ರ ಹೀಗೆ ತೋರಿಸುವಿ! ನಿಜವಾದ ಆನಂದವನ್ನು ಸ್ನೇಹಿತನ ಮುಂದೆ ಬಚ್ಚಿಡಬಾರದು!

**ಆನಂದ**—ಇಂದಿನವರೆಗೆ ನನಗಾದ ಆನಂದವನ್ನು ನಾನು, ನಿನ್ನಿಂದ ಬಚ್ಚಿಟ್ಟಿರುವೆನೆ?

**ನಂದನ**—ಅದು ಹೋಗಲಿ, ನಿನ್ನ ಮುಖವು ಹೀಗೇಕೆ ಇಳಿದುಹೋಗಿದೆ? ಅದನ್ನು ಮೊದಲು ಹೇಳು.

**ಆನಂದ**—ನಿನ್ನೆ ರಾತ್ರಿ ಜಾಗರಣೆಯಾಗಿತ್ತು, ಅದರಿಂದ ನಿನಗೆ ಹಾಗೆ ತೋರುತ್ತಿದ್ದೀತು. ನಿನ್ನೆ ಸತ್ಯನಾರಾಯಣವಿತ್ತು.

**ನಂದನ**—ಸತ್ಯನಾರಾಯಣವೇ-ಎಲ್ಲಿ? ಅಲ್ಲಿಯೋ? ಅದು ಏತಕ್ಕಾಗಿಯೆಂದು ನಿನಗೆ ತಿಳಿಯುವದೇ, ಮನೋರಥವು ಪೂರ್ಣವಾದ ಬಗ್ಗೆ!

**ಆನಂದ**—ಮನೋರಥವು ಯಾರದು ಪೂರ್ಣವಾಯಿತೋ, ನಾನಂತೂ ಕಾಣೆ!

**ನಂದನ**—ಯಾರದೆಂದರೆ ನಿಮ್ಮ ಉಭಯತರದು! ನಿನ್ನದು ಮತ್ತು ಅವಳದು.

**ಆನಂದ**—ನನ್ನದಂತೂ ಇಲ್ಲವಪ್ಪಾ. ಇನ್ನು ಅವಳ ಮನೋರಥ ಪೂರ್ಣವಾಗಿದ್ದರೆ, ಅದನ್ನು ನಾನೇನು ಬಲ್ಲೆ!

**ನಂದನ**—(ಸ್ವಗತ) ಇದೇನೋ ಬೇರೆ ಪ್ರಕಾರವಾಗಿ ಕಾಣುವದು. (ಪ್ರಕಾಶ) ಆನಂದಶೇಟ-ಇನ್ನು ಚೇಷ್ಟೆ ಸಾಕು! ನಿಜವಾಗಿ ಹೇಳು. ನಿನ್ನೆ ಏನಾಯಿತು?

**ಆನಂದ**—ಹೇಳುತ್ತೇನೆ. ಆದರೆ ಕೇಳಿದಮೇಲೆ ವಿನಾಕಾರಣ ಚೇಷ್ಟೆ ಮಾತ್ರ ಮಾಡಬೇಡಾ! ನಿನ್ನೆ ಶತತಾರೆಯ ಮನೆಯಲ್ಲಿ ಸತ್ಯನಾರಾಯಣವಿತ್ತು, ನಾನೂ ಹೋಗಿದ್ದೆ; ಆದರೆ ನಿತ್ಯದಂತೆ ಅಗತ್ಯ, ಆದರ, ಸತ್ಕಾರಗಳು-ವಿಶೇಷವಾಗಿ ಕಾಣಿಸಲಿಲ್ಲಾ. ನಾಲ್ಕು ಜನರು ಬಂದಿ

ದ್ದರು. ಅದರಲ್ಲಿ ನಾನೂ ಒಬ್ಬ. ಅವರೊಳಗೇ ನಾನೂ ಕುಳಿತು ಕೊಂಡಿದ್ದೆ. ಅವರೂ ಎದ್ದು ಹೋದರು. ಅವರ ಜೊತೆಯಲ್ಲಿಯೇ ನಾನೂ ಎದ್ದು ಬಂದೆ.

**ನಂದನ**—ಆಮೇಲೆ—

**ಆನಂದ**—ಆಮೇಲೇನು? ಪ್ರೇಮದ ಎಲೆ ಪಟ್ಟಿಯೇ ಇಲ್ಲ. ಎಲ್ಲರಿಗೂ ಎಲೆ ಪಟ್ಟಿಯನ್ನು ಕೊಟ್ಟಳು, ಅದರ ಜೊತೆಯಲ್ಲಿಯೇ ನನಗೂ ಒಂದು ಕೊಟ್ಟಳು. ಅದೂ ಸಹಾ ಬಾಡಿಹೋಗಿತ್ತು.

**ನಂದನ**—ನಿನ್ನೆ ಸತ್ಯನಾರಾಯಣದ ಗಡಿಬಿಡಿಯಲ್ಲಿ ಸ್ವಲ್ಪ ದುರ್ಲಕ್ಷವಾಗಿ ದ್ದರೂ ಆಗಿದ್ದೀತು. ಒಳ್ಳೇದು ಪೂಜೆಯು ಮುಗಿದನಂತರ ಯಾರ ದಾದರೂ ಸಂಗೀತವಾಗಿದ್ದೀತು.

**ಆನಂದ**—ಪ್ರಸಾದ ಕೊಡುವಾಗ ಅವಳು ಮೆಲ್ಲನೇ ಹೇಳಿದ್ದೇನೆಂದರೆ "ಈ ದಿನ ರಾತ್ರಿಯಲ್ಲಿ ಸಂಗೀತ ಕಚೇರಿ ನಡೆಯುವದು. ನಿಮ್ಮ ಇಷ್ಟವಿ ದ್ದಂತೆ ಮಾಡಬಹುದು. ಇಷ್ಟೇ ಹೇಳಿದಳು. ಇದರ ಹೊರತು ಅವಳ ಮುಖದಿಂದ ಬೇರೆ ಶಬ್ದವೇ ಹೊರಡಲಿಲ್ಲ.

**ನಂದನ**—ಅಂದಮೇಲೆ ಅವಳದೇನು ದೋಷ? ನಿನ್ನ ಮನಸ್ಸಿನಲ್ಲಿ—ಇಷ್ಟು ಜನರ ಸಮಕ್ಷಮ ಅವಳು—

**ಆನಂದ**—ಸಾಕು ಸಾಕು-ನಿನ್ನ ಮಾತು-ಮುಂದರಿಸಬೇಡ! ನಿನ್ನ ಅಭಿಪ್ರಾ ಯವು ನನ್ನ ವಿರುದ್ಧವಾಗಿಯೇ ಆಗುವದೆಂದು, ನಾನು ಮೊದಲೇ ಭವಿಷ್ಯ ಮಾಡಿದ್ದೆ. ಇರಲಿ ನೀನು ಸ್ವಲ್ಪ ಇಲ್ಲಿಯೇ ನಿಲ್ಲು; ಆ ಅಕ್ಕ ಸಾಲಿಗನ ಕಡೆಗೆ ಉಂಗುರವನ್ನು ಕೊಟ್ಟಿದ್ದೇನೆ, ಅದನ್ನು ತಕ್ಕೊಂಡು ಇದೇ ಈಗ ಬಂದೆ (ಹೋಗುವನು.)

**ನಂದನ**—(ಸ್ವಗತ) ಹೆಚ್ಚಿನ ಸಂಶಯಸ್ವಭಾವದ ಮನುಷ್ಯನಿವನು. ಇದೊಂದು ಗುಣವಿರದಿದ್ದರೆ, ಸ್ನೇಹಕ್ಕೆ ಬಹಳ ಯೋಗ್ಯನು, ಜೀವಕ್ಕೆ ಜೀವಾ ಕೊಡತಕ್ಕವನೇ! ಆದರೆ ಚಂಚಲ ಬುದ್ಧಿಯು! ಈಗ ಇವನಿಗೆ ನನ್ನಲ್ಲಿ ಬಹಳ ವಿಶ್ವಾಸ, ಆದರೆ ಯಾವಾಗ ಅವಿಶ್ವಾಸವುಂಟಾ

ದೀತೋ ಅವರ ನೇಮವಿಲ್ಲ. ಏನಾದರೊಂದು ಕಾರಣ ತೆಗೆದು ಸಂಶಯ ಪಾಶದಲ್ಲಿ ಕಟ್ಟುಬೀಳುತ್ತಾನೆ ಇವನು. ಇದೊಂದು ಮಾದರಿಯು. (ಆಚೆಗೆ ನೋಡಿ) ಇತ್ತಕಡೆಯಿಂದ ಯಾರು ಬರುತ್ತಿರುವರು!

**ವಿಜಯ**—(ತನ್ನಲ್ಲಿಯೇ ವಿಚಾರಮಾಡುತ್ತ ಬರುವನು) ಕೊಲೆ ಮಾಡಿ ಓಡಿ ಹೋದ ಗುರ್ತಿಲ್ಲದ ಮನುಷ್ಯನನ್ನು ಕೂಡಾ, ಇಷ್ಟು ಅವಧಿಯಲ್ಲಿ ಹುಡುಕಿ ತರಬಹುದಾಗಿತ್ತು, ಆದರೆ ನನ್ನ ಕೈಯಲ್ಲಿ ಆ ಗೃಹಸ್ಥನ ಭಾವಚಿತ್ರವಿದ್ದು-ನನಗೆ ಅವನ ಶೋಧವಾಗಲಿಲ್ಲ, ಇದು ಆಶ್ಚರ್ಯವೇ ಸರಿ. ಇವನಾರು ನಮ್ಮ ಬಂಗಲೆಯ ಮುಂದೆಯೇ ಸುಳಿದಾಡುತ್ತಿರುವನು! ಮುಖವು ಹೊಂದುವಹಾಗಿದ್ದರೆ ನೋಡೋಣ. (ಮುಂದೆ ಬಂದು) ಇವನ ಜೊತೆಗೆ ಮಾತಾಡಲೇ! (ಪ್ರಕಾಶ) ಏನು ಸ್ವಾಮೀ—ದಯವಿಟ್ಟು ಈ ಪಚ್ಚದ ಕಲ್ಲನ್ನು ಎಷ್ಟಕ್ಕೆ ತಕ್ಕೊಳ್ಳಬೇಕು, ಹೇಳುತ್ತೀರಾ (ಕೈಯಲ್ಲಿಯ ಉಂಗುರವನ್ನು ಬಿಚ್ಚಿ ಅವನ ಕೈಯಲ್ಲಿ ಕೊಟ್ಟು, ತಾನು ಅವನ ಮುಖ ನೋಡುತ್ತಾನೆ) ಸರಾಸರೀ—ನೋಡಿರಿ ಯೋಗ್ಯ ಬೆಲೆ ಕಟ್ಟಿರಿ.

**ನಂದನ**—ನನಗೆ ಇದರಲ್ಲಿ ವಿಶೇಷ ಪರೀಕ್ಷೆ ಇಲ್ಲಾ. ಆದರೂ ನೋಡುತ್ತೇನೆ. ಈ ಪಚ್ಚೆಯ ಬೆಲೆಯೂ.

**ವಿಜಯ**—(ಭಾವಚಿತ್ರ ಮತ್ತು ನಂದನ ಶೇಟನ ಮುಖ ನೋಡಿ) ಮೂಗು ಚನ್ನಾಗಿ ಹೋಲುವದು. ಆದರೆ ಹುಬ್ಬು—

**ನಂದನ**—ಇದನ್ನು ಸರಾಫರಲ್ಲಿ ಕೊಂಡುಕೊಂಡಿರಾ?

**ವಿಜಯ**—ಹೌದು ಸರಾಫರಲ್ಲಿಯೇ ಕೊಂಡದ್ದು. ಬೆಲೆ ಎಷ್ಟು ಕಟ್ಟಿದಿರಿ?

**ನಂದನ**—ಅದನ್ನೇ ನಾನು ನೋಡುತಿದ್ದೇನೆ.

**ವಿಜಯ**—(ಸ್ವ) ಕಣ್ಣುಗಳು ಸರಿಯಾಗಿ ಹೊಂದುವದಿಲ್ಲಾ. ಇಲ್ಲೆನ್ನಬೇಕೇ —ಹೀಗೆ ನಿಂತು ನೋಡುವಾ!

**ನಂದನ**—ಸರಾಸರಿ ಬೆಲೆ ನಾನು ಹೇಳುತ್ತೇನೆ. ಇದರ ಬೆಲೆಯು ೫೦೦ ರೂಪಾಯಿಗಳ ವರೆಗೆ ಆಗಬಹುದು. ಐವತ್ತು ಹೆಚ್ಚು ಐವತ್ತು ಕಡಿಮೆ.

**ವಿಜಯ**—(ಸ್ವ) ಛೆ-ಛೆ! ಏನೂ ಹೋಲುವದಿಲ್ಲಾ ಇವನ ಮುಖ ಮುದ್ರೆಯು ತೀರಾ ಬೇರೆಯಾಗಿದೆ.

**ನಂದನ**—ಅಷ್ಟೇ-ಅಷ್ಟೇ ಬೆಲೆಯು. ೫೦೦ ರೂಪಾಯಿಗಳ ವರೆಗೇ—

**ವಿಜಯ**—ನಮಗೂ ನಿಮಗೂ ವಿಶೇಷ ಹೆಚ್ಚು ಕಡಮೆ ಬರಲಿಲ್ಲ. ನಾನು ಇದನ್ನು ಕೊಂಡದ್ದು ೨೫೦ ಕ್ಕೆ—!

**ನಂದನ**—ಏನಂದಿರಿ ೨೫೦ಕ್ಕೇ ನೀವು ಕೊಂಡದ್ದು, ಹಾಗಿದ್ದರೆ ಬಹಳ ಸುಲಭ ವಾಗಿ ದೊರೆತಿದೆ ನಿಮಗೇ—

**ಆನಂದ**—(ಬರುವನು) ನಂದನಶೇಟ-ಆಯಿತು ನನ್ನ ಕೆಲಸ. ನಡೆ ಇನ್ನು ಆ ಮಾವಿನ ತೋಪಿನ ಬಂಗಲೆಯ ಮೇಲೆ ಹಾಯ್ದು ಹೋಗೋಣ.

**ವಿಜಯ**—(ಸ್ವಗತ) "ಮಾವಿನ ತೋಪಿನ ಬಂಗಲೆಯ ಮೇಲೆ ಹಾದು ಹೋಗೋಣ!" ನಮ್ಮ ಬಂಗಲೆಯ ಮೇಲೆ ಹಾಯ್ದು ಹೋಗತಕ್ಕ ವನು ಇವನಾರು? ಈಗ ಎಂಟ್ಹತ್ತು ದಿನಗಳಿಂದ ನಮ್ಮ ಬಂಗಲೆಯ ಮಾರ್ಗವೆಂದರೆ, ಒಂದು ದೊಡ್ಡ ರಾಜಮಾರ್ಗವಾಗಿ ಹೋಗಿದೆ. ಯಾವನೊಬ್ಬನೂ ನಮ್ಮ ಬಂಗಲೆಯ ಮೇಲೆಯೇ ಹಾಯ್ದು ಹೋಗ ತಕ್ಕವನೇ! ಇದೇನು ಚಮತ್ಕಾರವು!

**ಆನಂದ**—ನಂದನಶೇಟ ನೀನೂ ಬರುವಿಯಲ್ಲವೇ? ಒಂದುವೇಳೆ ಅವಳು ದೇವಾಲಯಕ್ಕೆ ಹೋಗಿದ್ದರೆ, ಅಲ್ಲಿಯೇ ಅವಳ ಭೇಟಿಯಾದೀತು. (ಮಾತಾಡುತ್ತಾ ನಿಲ್ಲುವರು)

**ವಿಜಯ**—(ಸ್ವಗತ) ಓಹೋ ಭೇಟಿಯಾಗಬಹುದು! ಆಗದೇ ಹೇಗಿದ್ದೀತು! ನೋಡಿದಿರಾ, ದೇವಾಲಯಕ್ಕೆ ಹೋಗುವಾಗ, ಮೊದಲು ನಮ್ಮವಳ ಭೆಟ್ಟಿಯೇ ಮುಖ್ಯ! ಇದಕ್ಕಿಂತಲೂ ಹೆಚ್ಚಿನ ಅವಮಾನವು ಮತ್ತಾ ವುದು ನನಗೆ! ಇರಲಿ ಮೊದಲು ಇವನ ಮುಖಚರ್ಯೆಯನ್ನು ಗುರ್ತು ಹಿಡಿದು ಇಡೋಣ.

**ನಂದನ**—ಭಲೆ ನೀನು ಒಳ್ಳೆ ವಿಲಕ್ಷಣ ಸ್ವಭಾವದವನು! ಆಗಲೇ ಮಾತಾ ಡಿದ ಪ್ರಕಾರವೇ ಬೇರೆ, ಮತ್ತು ಈಗ ಮಾತಾಡುವ ರೀತಿ ಬೇರೆ!

ಯೇನೂ ಸಂಬಂಧವೇ ಇಲ್ಲವಲ್ಲಾ.

**ಆನಂದ**—ಎಲವೋ—ಅದರ ಕಾರಣವು ಹೀಗಿದೆ—(ಅವನ ಕಿವಿಯಲ್ಲಿ ಏನೋ ಹೇಳುತ್ತಾನೆ)

**ವಿಜಯ**—(ಸ್ವ) ಭಾವಚಿತ್ರವು ಇವನದೇ ಅನ್ನುವಂತೆ ಕಾಣುವದು. ಆದರೆ ಒಂದೇ ಜಾಗದಲ್ಲಿ ನಿಂತು ನೋಡಿದರೆ ಚನ್ನಾಗಿ ಕಾಣುವದಿಲ್ಲ—ಹೀಗೆ ಯುಕ್ತಿ ಮಾಡೋಣ!

ಪರನಾರಿಯೂ ದಾರುಣ ವಿಷವೊ !
ಬರಿದೆ ಬಯಸಿ ನೀ ಕೆಡಬೇಡಾ ||

(ಈ ಪಲ್ಲವಿಯನ್ನು ಗೊಣಗುಟ್ಟುತ್ತಾ ಅತ್ತಿಂದ ಇತ್ತ, ಈಚೆಯ ಕಡೆಯಿಂದ ಆಚೆಯ ಕಡೆಗೆ ಓಡಾಡುವನು)

ಕಣ್ಣುಗಳು ಸರಿಯಾಗಿ ಹೋಲುತ್ತವೆ. ಮೂಗಿನ ಹೋಲಿಕೆಯಾದರೂ ಚನ್ನಾಗಿ ಕೂಡುವದು.

**ನಂದನ**—(ಆನಂದದಿಂದ ಆನಂದಶೇಟನಿಗೆ) ಎಲವೋ ನಾನಂತೂ ಇದನ್ನು ಮೊದಲೇ ಯೋಚಿಸಿದ್ದೆನು. ನಿನ್ನ ಬುದ್ಧಿಯು ಸ್ಥಿರವಾಗಿ ಉಳಿದರೆ ಏನಾಗಲಿಕ್ಕಿಲ್ಲ.

**ಆನಂದ**—ನೀನು ಹೇಳುವದೇ ನಿಜವಾಗಿರಬಹುದು. ನನ್ನನ್ನು ಕೇಳಿದರೆ ಅವಳ ದೃಷ್ಟಿಯೇ ಹಾಗಿರುವದು. ಇದೋ ನೋಡು (ಕಿವಿಯಲ್ಲಿ ಹೇಳುವನು.)

**ವಿಜಯ**—(ಸ್ವಗತ) ಬಣ್ಣವು ಕೂಡಿತು. ಹುಬ್ಬುಗಳೂ ಸರಿಯಾಗಿ ಕೂಡುವವು. ಮುಖಚರ್ಯದ ಹೋಲಿಕೆ ಕೂಡಿತು-!! ಅವನೇ, ಅವನೇ ಇವನು !

ಪರನಾರಿಯೂ ದಾರುಣ ವಿಷವು !
ಬರಿದೆ ಬಯಸಿ ನೀ ಕೆಡಬೇಡ ||

**ಆನಂದ**—ನಂದನಶೇಟ- ಈತನಾರು ? ನಮ್ಮನ್ನೇ ನೋಡುತ್ತಿರುವನು. ಮತ್ತು ಏನೋ ಗೊಣಗುಟ್ಟುತ್ತಿರುವನು—! ಯಾರಿವನು-?

**ನಂದನ**—ಯಾವನಾದರೂ ಹುಚ್ಚನಾಗಿರಬಹುದು. ಸುಮ್ಮನೇ ನಿಂತಿರುವನಾದೀತು. ಶೋಕಿಯಿಂದ-!

**ವಿಜಯ**—(ಸ್ವ) "ಪರನಾರಿಯೂ ದಾರುಣ ವಿಷವು" ಹೀಗೆ ನಾನು ಅನ್ನುವಾಗ ಅವನ ಮುಖವು ತೀರಾ ಕಪ್ಪಾಗಿಹೋಗಿತ್ತು. ಕಪ್ಪು !

**ನಂದನ**—ಇದೋ ಇಂತಹ ಹುಚ್ಚರನ್ನು ಸುಮ್ಮನೇ ಹೀಗೆ ಅಡ್ಡಾಡಗೊಡುವದು ಯೋಗ್ಯವಲ್ಲಾ, ಯಾಕಂದರೆ ಇವನು ಹೀಗೇ ತಿರುಗಾಡುವದರಿಂದ ಇವನ ಹುಚ್ಚು ಮತ್ತಷ್ಟು ತಲೆಗೇರುವ ಸಂಭವ ಕೂಡಾ ವುಂಟು. ಅದೋ ನೋಡು ಹೇಗೆ ನೋಡುತ್ತಿರುವನು, ಆದರೆ ನೋಡುವದಕ್ಕೆ ಚನ್ನಾಗಿ ಕಾಣುತ್ತಾನೆ !

**ವಿಜಯ**—ಅವನೇ-ಅವನೇ-ಅದೋ ಆಗಲ್ಲದ ಮೇಲಿನ ಕಲೆಯು, ಮತ್ತು ಆ ಕಲೆಯು ಎಡಗಣ್ಣಿನ ಕೆಳಭಾಗಕ್ಕೆ ಸ್ವಲ್ಪ ಗಲ್ಲದಮೇಲ್ತುದಿಯಲ್ಲಿ (ಪರನಾರಿಯೂ ದಾರುಣ ವಿಷವೋ !)

**ಆನಂದ**—ನಂದನಶೇಟ ಇವನಿಗೆ ಪರನಾರಿಯ ಹುಚ್ಚೇ ಹಿಡಿದುಹೋಗಿದೆ.

**ವಿಜಯ**—(ಆತ್ಮಗತ) ಇದುವರೆಗೂ ದೂರ ನಿಂತು ನೋಡಿದ್ದಾಯಿತು ! ಇನ್ನು ಏನಾದರೂ ಮಾತಾಡುವ ನಿಮಿತ್ತ ಮಾಡಿ ಸಮೀಪಕ್ಕೆ ಹೋಗಿ ಪರೀಕ್ಷಿಸಬೇಕು. (ಸಮೀಪಕ್ಕೆ ಹೋಗಿ) ಏನು ಸ್ವಾಮೀ—ಈ ವರುಷ ಹಿಂದುಸ್ಥಾನದಲ್ಲಿ ದೊಡ್ಡ ಬಂಡಾಯವೇ ಏಳುವ ಸಂಭವ ವಿರುವದೆಂದು ಅನ್ನುತ್ತಾರೆ ನಿಜವೋ ಯೇನು ?

**ಆನಂದ**—(ನಗುತ್ತ) ಬಂಡಾಯವೇ ಅದು ಎಲ್ಲಿ ? ನಮಗಂತೂ ತಿಳಿಯದು. ನಂದನಶೇಟ ಇವನು ಯಾವನಾದರೂ ಹೋದ ಬಂಡಾಯದಲ್ಲಿಯ ಸರದಾರನಿರಬಹುದೇ ?

**ನಂದನ**—ಎಲವೋ—ಆಗಲೇ ಇತನು ನನಗೆ ಪಚ್ಚೆಯ ಬೆಲೆಯನ್ನು ವಿಚಾರಿಸುತ್ತಿದ್ದನು.

**ವಿಜಯ**—(ಸ್ವ) ತೀರಾ ಕಸರು ಇಲ್ಲದಂತೆ ವರೆಗೆ ವರೆ ಕೂಡಿತು. (ಪರನಾರಿಯೂ ದಾರುಣ ವಿಷವೋ ! ) (ಗೊಣಗುಟ್ಟುತ್ತಾನೆ)

**ಆನಂದ**—ಎಲವೋ ಯೇತಕ್ಕೆ ಈ ಹುಚ್ಚನ ಬೆನ್ನುಹತ್ತಿರುವೆ? ನಡೆ ಹೋಗೋಣ.

**ನಂದನ**—ನಡೆ ಹಾಗಾದರೆ—ಈತನು ಹುಚ್ಚನಾಗಿರುವದೇನೋ ನಿಜ; ಅದರಲ್ಲಿಯೂ ವಿನೋದವಾದ ಹುಚ್ಚು-!

**ವಿಜಯ**—(ಆತ್ಮಗತ) ಇದೋ ಹೊರಟನು. ತಪ್ಪಿಸಿ ಹೋಗುವದಕ್ಕೆ ಪ್ರಯತ್ನಿಸುತ್ತಾನೆ. ಮೋಸಗಾರಾ—ನನ್ನ ಹೆಂಡತಿಗೆ ಭಾವ ಚಿತ್ರ ಕೊಟ್ಟ ನೀಚನು ಇವನೇ! ಆದರೆ ಇವನ ಹೆಸರು ಹೇಗೆ ತಿಳಿಯ ಬೇಕು. (ಪ್ರಕಾಶ) (ಆನಂದಶೇಟನನ್ನು ಕುರಿತು) ಸ್ವಾಮೀ ಸ್ವಲ್ಪ ನಿಲ್ಲಿ, ದಯವಿಟ್ಟು ನಾನು ವಿಚಾರಿಸುವುದನ್ನಷ್ಟು ಹೇಳಿದರೆ—ಯೇನು ಅಂದರೆ—ತಮ್ಮ ಹೆಸರು ಮಾರ್ಗಶೀರ್ಷಶೇಟ ಅಲ್ಲವೇ?

**ಆನಂದ**—(ನಕ್ಕು) ಅಲ್ಲಾ ನನ್ನ ಹೆಸರು ಆನಂದ ಶೇಟ.

**ವಿಜಯ**—ತಮ್ಮದಲ್ಲದೇ ಹೋದರೆ ತಮ್ಮ ಅಣ್ಣತಮ್ಮಂದಿರಲ್ಲಿ ಯಾರಾದರೂ ನಾನು ಹೇಳುವ ಹೆಸರಿನವರಿರುವರೊ?—

**ಆನಂದ**—ನನ್ನ ಅಣ್ಣತಮ್ಮಂದಿರದಿಲ್ಲಾ—ನನ್ನ ಕಕ್ಕನದಿಲ್ಲಾ, ನಮ್ಮ ಮನೆ ಯಲ್ಲಿ ಯಾರೂ ಈ ಹೆಸರಿನವರಿಲ್ಲಾ—

**ವಿಜಯ**—ಯಾರಾದರೂ ಇರಬಹುದೆಂದು ನಾನು ತಿಳಿದಿದ್ದೆನು. ಯಾಕಂ ದರೆ ಆ ಗೃಹಸ್ಥರು ನನ್ನ ಕೇವಲ ಸ್ನೇಹಿತರು! ಅವರದೂ ನಿಮ್ಮದೂ ಮುಖಚರ್ಯವು ಚನ್ನಾಗಿ ಕೂಡುವದು. ಅಂತೆಯೇ ನಾನು ವಿಚಾರಿ ಸಿದೆನು. ನನ್ನ ಹತ್ತಿರ ಅವರದೊಂದು ಭಾವಚಿತ್ರವಿರುವದು. ತಾವು ಸ್ವಲ್ಪ ಹೊತ್ತು ತೊಂದರೆ ಸಹಿಸಿ ನಿಲ್ಲುವದಾದರೆ, ಪರೀಕ್ಷಿಸುತ್ತೇನೆ.

**ಆನಂದ**—ನಂದನಶೇಟ ಇದೊಂದು ನಮಗೆ ಸಾಡೇಸಾತಿಯೇ ಗಂಟುಬಿತ್ತು. ಒಳ್ಳೇದು ಪರೀಕ್ಷಿಸಿರಿ! ಯಾಕೆ—ಏನಾದರೂ ಕೂಡುವದೋ? ಏನು?

**ವಿಜಯ**—ತಾವು ಸ್ವಲ್ಪ ಮುಖವನ್ನು ತಿರುಗಿಸಿದರೆ ನೆಟ್ಟಗಾಗುವದು.

**ನಂದನ**—ಏನು—ಸರದಾರ ಸಾಹೇಬರೇ—ಸಾಹುಕಾರ ಸಾಹೇಬರೇ-ಸಾಕು ಮಾಡಿರಿ ಈ ತೊಂದರೆಯನ್ನು! ನಾವು ಹೋಗುತ್ತೇವೆ. ನಡೆಯಪ್ಪಾ

ಈ ತಲೆತಿರುಕ ಮನುಷ್ಯನ ಸಂಗತಿ ನಮಗೇನು ಪ್ರಯೋಜನ—?
ಸ್ವಾಮೀ—ನೀವು–ಯಾವುದಾದರೂ ಮಣೇದಿಯಲ್ಲಿ ಕುಳಿತುಕೊಳ್ಳಿರಿ.

**ವಿಜಯ**—(ಸ್ವ) ಇಬ್ಬರೂ ನನ್ನ ಕಡೆಗೆ ನೋಡುತ್ತಾ ನಗುತ್ತಿದ್ದಾರೆ! ನಗಿರಿ! ನೀವಷ್ಟೇ ಏಕೆ ನನ್ನನ್ನು ನೋಡಿ ಯಾವತ್ತು ಜಗವೇ ನಗಹತ್ತುವದು. ಇನ್ನುಮೇಲೆ ಹೀಗೆ ಮಾಡೋಣ! (ಪ್ರ) ಏನು ಸ್ವಾಮೀ—ಇದೋ ಇದೋ ನೋಡಿ-ಭಾವಚಿತ್ರ! (ಮನಸ್ಸಿನಲ್ಲಿ) ಆದರೆ ಬೇಡಾ.

(ಭಾವಚಿತ್ರವನ್ನು ಅಡಗಿಸುತ್ತಾನೆ)

**ಆನಂದ**—ಎಲಾ ಇದೇನು? ನಾನು ಶತತಾರೆಗೆ ಕೊಟ್ಟ ಭಾವಚಿತ್ರದಂತೆ ಕಾಣುವದು. ಇದು ಹೇಗೆ? ಇದೇನೋ ಗಲಾಟೆ ಇರುವದು— ಈ ಭಾವಚಿತ್ರವು ಅದೇ ಆಗಿದ್ದರೇ—

(ಸ್ವಲ್ಪ ಮುಂದಾಗುವನು.)

**ವಿಜಯ**—(ಸ್ವಗತ) ಗುಂಡು ತಗಲಿತು, ತಗಲಿಯೇ ಹೋಯಿತು! ಅಂತೆಯೇ ರಾಯರು ಸಮೀಪ - ಸಮೀಪಕ್ಕೆ ಬರಹತ್ತಿದರು. ಬಹುತರವಾಗಿ ಈ ಭಾವಚಿತ್ರವನ್ನು ನನ್ನಿಂದ ಕಶಿದುಕೊಳ್ಳುವ ಪ್ರಯತ್ನ ಮಾಡುವಂತೆ ಕಾಣುವದು. ನಾನು ಇದನ್ನು ಜೇಬಿನಲ್ಲಿಯೇ ಇರಿಸುತ್ತೇನೆ, ಅಂದ ಮೇಲೆ ಏನು ಮಾಡುತ್ತಾನೆ? ನಡೆ ಜೇಬಿನಲ್ಲಿ ಕೂಡು. (ಜೇಬಿನಲ್ಲಿಡುವನು.)

**ಆನಂದ**—ಇವನು ಭಾವಚಿತ್ರವನ್ನು ಜೇಬಿನಲ್ಲಿ ಹಾಕಿದನು. ನಂದನಶೇಟ ಈತನು ಹುಚ್ಚನಲ್ಲ. ನಮ್ಮಂಥವರಿಗೆ ಹುಚ್ಚು ಹಿಡಿಸುವವನು!

**ನಂದನ**—ನೀನು ಸ್ವಲ್ಪ ಸವಿಮಾತಾಡು ಅಂದರಾಯಿತು.

**ವಿಜಯ**—(ಸ್ವ) ಇಬ್ಬರೂ ಸೇರಿ ಏನೋ ಆಲೋಚನೆ ನಡೆಸಿರುವರು. ಇನ್ನು ಮೇಲೆ ಇಲ್ಲಿಂದ ಓಡಿಹೋಗುವದೇ ಲೇಸು.

**ಆನಂದ**—ಏನು? ಸಾಹುಕಾರ ಸಾಹೇಬರೇ,—ದಯವಿಟ್ಟು ನಮ್ಮ ಆ ಭಾವಚಿತ್ರವನ್ನು........

**ವಿಜಯ**—ಜಯಗೋಪಾಳ (ಹೋಗಲು ಗಡಿಬಿಡಿಮಾಡುವನು)

**ಆನಂದ**—ಪಮ್ಮೆ ನೋಡಿಕೊಡುತ್ತೇನೆ—

**ವಿಜಯ**—ಏನು ನೋಡಿ ಕೊಡುತ್ತೀರಿ ?

**ಆನಂದ**—ಆ ಭಾವಚಿತ್ರವು ನಿಮ್ಮ ಕೈಯಲ್ಲಿಯೇ ಇರಲಿ ! ನಾನು ಇಲ್ಲಿಂದಲೇ ನೋಡುತ್ತೇನೆ.

**ವಿಜಯ**—ಭಾವಚಿತ್ರವೇ ಚನ್ನಾಗಿಲ್ಲ ಸ್ವಾಮೀ,—ಸುಮ್ಮನೆ ಒಬ್ಬ ಚಿತ್ರಗಾರ ಹುಡುಗನು ಏನೋ ಬರೆದಿರುವನು—ಆಯಿತು—!

**ಆನಂದ**—ಆದರೆ ಮೊದಲು ಅದನ್ನು ಹೊರಗಾದರೂ ತೆಗೆಯಿರಿ- ! ಹೇಗಿದೆಯೋ ನೋಡೋಣ.

**ವಿಜಯ**—ಅದೆಂತಹ ಚಿತ್ರ ರಾಯರೇ—ತಮ್ಮಂತಹ ದೊಡ್ಡ ಮನುಷ್ಯರು ನೋಡುವಂತಹದೇನೂ ಅದಲ್ಲ. ಏನೋ ಒಂದು ಇದೆ ಅಷ್ಟೇ—

**ಆನಂದ**—(ಸಿಟ್ಟಿನಿಂದ) ಸ್ವಲ್ಪ ತೋರಿಸಿ ಅಂದರೆ ತೀರಿತು. ಅದನ್ನು ನಾನೇನು ತಿನ್ನುವದಿಲ್ಲಾ. ನೋಡಿ ತಿರುಗಿ ಕೊಡುತ್ತೇನೆ. ಹೂ ತೋರಿಸಿ ನೋಡುವಾ—

**ವಿಜಯ**— ಈಗ ಇವರು ಹಟಕ್ಕೇ ಬಿದ್ದರು. ಇನ್ನು ಓಡಿಹೋಗುವುದೇ ಉತ್ತಮವು. ಯಾಕಂದರೇ ಇವರು ಇಬ್ಬರು ; ನಾನು ಒಬ್ಬನೇ ಸಿಕ್ಕಿದ್ದೇನೆ. (ಪ್ರಕಾಶ) ಭಾವಚಿತ್ರ ಏನೂ ಚನ್ನಾಗಿಲ್ಲಾ, ಸ್ವಾಮೀ— ಬರುತ್ತೇನೆ ! ಬರುತ್ತೇನೆ ! ಜಯಗೋಪಾಳ. ಈಗ್ಯೆ ನನಗೆ ಅವಕಾಶವಿಲ್ಲಾ—ಎಂದಾದರೂ ಮತ್ತೊಂದು ಸಲ ತೋರಿಸುತ್ತೇನೆ. (ಓಡಿ ಹೋಗುವನು.)

**ಆನಂದ**—ನಂದನಶೇಟ ನಾನು ಶತತಾರೆಗೆ ಕೊಟ್ಟ ಭಾವಚಿತ್ರವು—ಇದೇ ಅದು.

**ನಂದನ**—ಸುಮ್ಮನೇ ಏನಾದರೂ ಕಲ್ಪಿಸುವೆ ! ಅದೇ ಭಾವಚಿತ್ರವೆಂದು ಹೇಗೆ ಹೇಳುವಿ ?

**ಆನಂದ**—ನಾನು ನೋಡಿದೆನೆಂದು. ಅಂತಹ ಕೆತ್ತನೆಯ ಕೆಲಸವು ನನ್ನ ಭಾವಚಿತ್ರದ ಚೌಕಟ್ಟಿಗೇ ಇರುವದು.

**ನಂದನ**—ಎಲ್ಲೋ ಚೌಕಟ್ಟಿನಂತೆ ಚೌಕಟ್ಟು ಬೇಕಾದಷ್ಟಿವೆ. ಸುಮ್ಮನೆ ತರ್ಕ ಮಾಡುತ್ತ ಕೂಡಬೇಡಾ.

**ಆನಂದ**—ನಾನು ಮಾಡುವದು ತರ್ಕವಲ್ಲಾ—ನಾನು ಪ್ರತ್ಯಕ್ಷವಾಗಿ ನೋಡಿದೆನು. ಅವಳು ಆ ಭಾವಚಿತ್ರವನ್ನು ಈ ವೃದ್ಧನಿಗೆ ಕೊಟ್ಟದ್ದೇ ನಿಜವು. ಇದರಲ್ಲಿ ಸಂಶಯವಿಲ್ಲ.

**ನಂದನ**—ಇದೊ ಮತ್ತೆ ನಿನ್ನ ತರ್ಕವು ಪ್ರಾರಂಭವಾಯಿತು—ಎಚ್ಚರವಾಗಿರು—

**ಆನಂದ**—ಇನ್ನೇನು ಎಚ್ಚರ! ಕೆಲಸ ಕೆಟ್ಟುಹೋಯಿತು. ಮತ್ತು ನಾನು ನಿನಗೆ ಇದನ್ನು ಸಿದ್ಧ ಮಾಡಿ ಕೊಡಬೇಕಾದರೆ, ನಿನ್ನೆ ರಾತ್ರಿ ಅವಳು ನನ್ನ ಕೂಡ ವರ್ತನಮಾಡಿದ್ದೇ ಅದಕ್ಕೆ ಸಾಕ್ಷಿಯು.

**ನಂದನ**—(ಸ್ವ) ಇನ್ನು ಇವನ ಸ್ವಭಾವಕ್ಕೆ ಏನು ಮಾಡಬೇಕು. ಬರಿಯ ಒಂದು ಚೌಕಟ್ಟಿನಂಥ ಇನ್ನೊಂದು ಚೌಕಟ್ಟನ್ನು ನೋಡಿದ ಕೂಡಲೇ ಇವನ ತಲೆಯೋ ಕೆಟ್ಟುಹೋಯಿತು. ತೀರಾ ಕಳಸವಾಯಿತು. (ಪ್ರಕಾಶ) ಆ ಭಾವಚಿತ್ರವು ನಿನ್ನದಲ್ಲಾ ನಿಜವಾಗಿಯೂ ಅಲ್ಲಾ. ಶತತಾರೆಯು ನಾಯಕಸಾನಿಯಾದರೂ ಮೋಸಗಾರ್ತಿಯಲ್ಲ.

**ಆನಂದ**—ಹಾಗಲ್ಲ ಬಿಡು! ಅದೇ–ಅದೇ ಆ ಭಾವಚಿತ್ರವು. ಶತತಾರೆಯು ತನ್ನ ಜಾತಿ ಧರ್ಮವನ್ನೇ ಅನುಸರಿಸಿದಳು. ಅದು ಸಹಜವಾಗಿದೆ. ಯಾಕಂದರೇ—

ರಾಗ—ಅಡಾಣ ತಾಳ—ತ್ರಿವಟ

**ಮಹಾಚಪಲಾ ವಾರವನಿತಾ ॥ ಬಹುಪರಿಯಾ ಕಪಟಾನೃತ । ಮೋಹಕ ಭಾಷಣ । ಬಿಡುವಳೆಂತು ಸ್ವಗುಣಾ ॥ಪಲ್ಲ॥ ಇತ್ತಳೆನ್ನಯ ಭಾವ ಚಿತ್ರವಾ। ಪರಪುರುಷನಿಗೆ ತಾ ॥ ಸತ್ಯ ತನ್ನ ಕುಲಲೀಲೆಯ ತೋರೀ । ಗೈದಳೆನಗೆ ತಾಪಾ ॥ ೧ ॥**

ನಡೆ ಹಾಗಾದರೆ ಅವಳ ಕಡೆಗೆ ಹೋಗದ ವಿನಹ ಯಾವುದೂ ತಿಳಿಯುವದಿಲ್ಲ.

**ನಂದನ**—ಎಲೋ ಅದಕ್ಕೇಕಿಷ್ಟು ಅವಸರ! ಊಟ ತೀರಿಸಿಕೊಂಡು ಹೋಗ್ಗದರಾಯಿತು.

**ಆನಂದ**—ಮೊದಲು ಇತ್ಯರ್ಥ; ಆಮೇಲೆ ಊಟದ ವಿಚಾರ! ಅಲ್ಲಿಯವರೆಗೆ ನನ್ನ ಮನಸ್ಸಿಗೆಲ್ಲಿ ಸಮಾಧಾನ? (ಹೋಗುವರು)

**ವಿಜಯ**—(ಪ್ರವೇಶಿಸಿ) ಇದೋ ಹೊರಟುಹೋದನು. ಎಲಾ ಕಳ್ಳಾ ನನ್ನ ಸಂಸಾರಕ್ಕೆ ಕೇರು ಹಾಕಿದೆಯಾ—?

ರಾಗ—ಕಾಮೋದ ತಾಳ—ತ್ರಿವಟ

ಅಧಮಾ ಬಿಡೆನಿನ್ನ ನೀಚಾ। ಇದುಕೇಳ್ ನೀನೆನಗೆ ವೈರಿಯೋ ॥ ಪಲ್ಲ ॥ ಜವದಿ ನಿನ್ನನಾ। ಬಿಡದೆಶೋಧಿಪೇ ॥ ಅವಳ ಪಾಪತೋ। ರುವೆ ಜಗಕೇ ॥ ೧ ॥

## ೩ ನೆಯ ಪ್ರವೇಶ

(ಸ್ಥಳ. ಶತತಾರೆಯ ಮನೆ. ಶತತಾರೆ ಮತ್ತು ಅವಳ ಗೆಳತಿ)

**ಚಿತ್ರಾಂಗದಾ**—ಇತ್ತೀಚೆಗೆ ಆನಂದಶೇಟರು ನಿನ್ನ ಕಡೆಗೆ ಎಷ್ಟೋ ಸಲ ಬರುತ್ತಾರೆ! ಹೋಗುತ್ತಾರೆ. ಅವರ ಕೂಡೋಣ, ಮಾತಾಡೋಣ, ಎಲ್ಲ ಇಲ್ಲಿಯೇ ನಡೆಯುವಂತೆ ಕಾಣುತ್ತದೆ! ಇಷ್ಟು ಬೇಗ ಹೀಗಾಗುವದೆಂದು ನಾನು ಎಣಿಸಿರಲಿಲ್ಲ, ಆದರೆ ನಾನು ಇದನ್ನು ಕನಸಿನಲ್ಲಿಯೇ ಕಂಡಿದ್ದೆನು. ಅದು ಹೋಗಲಿ ನೀನಾದರೂ ಒಂದು ಮಾತು ತಿಳಿಸಬಾರದೇ? ಎಂಥವಳೇ ನೀನು!

**ಶತತಾರ**—ನಿನ್ನ ಸಮ್ಮತಿಯು ಇದಕ್ಕೆ ದೊರೆಯಲಿಕ್ಕಿಲ್ಲವೆಂದು ತಿಳಿದು, ನಿನಗೆ ಈ ಮಾತು ತಿಳಿಸಲಿಲ್ಲ.

**ಚಿತ್ರಾಂಗದಾ**—ಹೇಗೆ ಸಮ್ಮತಿ ಕೊಡಲಿ? ನಿಜವಾಗಿಯೂ ಹೇಳುತ್ತೇನೆ, ನೀನು ಇದನ್ನು ತೀರಾ ಹುಡುಗಾಟದ ವಿಚಾರವನ್ನೇ ಮಾಡಿದೆ. ನಿನ್ನದು ಈಗ ನಾಲ್ಕು ದುಡ್ಡುಗಳಿಸುವ ವಯಸ್ಸು ಇಂತಹ ವಯಸ್ಸಿನಲ್ಲಿ ನೀನು ಒಬ್ಬ ಪುರುಷನನ್ನೇ ನಂಬಿ ಕುಳಿತರೆ, ಮುಂದೇನು ಮಾಡುವೆ? ಮುಖವು ನಿರಿಗೆ-ಗಟ್ಟಿದಮೇಲೆ ಈ ದಿನಗಳು ಬರುವವೆ?

**ಶತತಾರ**—ಈ ದಿವಸ ನೀನೇ ಈ ಮಾತು ತೆಗೆದದ್ದರಿಂದ ಹೇಳುತ್ತೇನೆ ಕೇಳು.

ರಾಗ—ಪಹಡಿ ತಾಳ—ಧುಮಾಳಿ

ಮಹಾಖಲ ಪಾಪವಿದೇ। ದೇಹಾ ವಿಕ್ರಯು ॥ ಮಾಳ್ಪುದು ಅನ್ಯಾಯು ॥ಪಲ್ಲ॥ ಅಹಾ ಧನ ಸಂಪಾದಿಸಲು ಸದಾ ವಿಟರಿಗೆ ॥ ತೋರಿ ಕುಟಿಲಪ್ರಣಯು ॥ ಸುಹಾಸ್ಯದಿ ಭಯ ಲಜ್ಜಾವಿನಯು। ತ್ಯಜಿಸುತೆ ವಂಚಿಪರೇ ಸಹಜ ॥ ಬಹು ಪರಿಹೀನ। ಕರ್ಮಗಳಾಚರಿಸುತಲೇ। ಜೀವಿಪರೇ ಧರೆಯೊಳು ॥ ೧ ॥

**ಚಿತ್ರಾಂಗದಾ**—ಏನೇ—ದಿನಾಲೂ ಹೊಸ-ಹೊಸ ಅಲಂಕಾರಗಳನ್ನು ಮಾಡಿ ಕೊಂಡು—ಯಾವುದೂ ವ್ಯಸನವಿಲ್ಲದೇ ಹಗಲು ರಾತ್ರಿ ಆನಂದದಲ್ಲಿಯೇ ಕಾಲ ಕಳೆಯುವದನ್ನು ಬಿಟ್ಟು—ಇದೆಲ್ಲಿಯ ಬ್ರಹ್ಮಜ್ಞಾನ ಕಲಿತೆಯೇ ? ಎಂಟು ದಿನಗಳಲ್ಲಿಯೇ ನಿನ್ನ ಅನುಭವಕ್ಕೆ ತಾನೇ ಬಂದೀತು. ನಿನ್ನ ಹಿಂದಿನವರು ಇದೇ ಕೆಲಸ ಮಾಡುತ್ತ ಬರಲಿಲ್ಲವೇ ? ಅವರೇನು ಬುದ್ಧಿಹೀನರೇ--ಅವರು ಶರೀರವಿಕ್ರಯವನ್ನು ಮಾಡಿ ಎಷ್ಟೋ ದುಡ್ಡು ಗಳಿಸಿಟ್ಟರು. ಮತ್ತು ನೀನು ಆ ದುಡ್ಡಿನ ಬಲದ ಮೇಲೆಯೇ ಹೀಗೆ ಕುಣಿದಾಡುತ್ತಿರುವಿಯಲ್ಲವೆ ? ಅದರಲ್ಲಿ ನೀನೇನು ಹೆಚ್ಚು ಮಾಡಿದೆ ? ಇದಕ್ಕಿಂತಲೂ ಚವಡಿಕೆ ಬಾರಿಸುತ್ತಾ ಜೋಗಮ್ಮನಂತೆ ತಿರುಗಿದರೆ ನಾನು ಹೌದಂದೇನು ! ಏನೇ ಮತ್ತೊಬ್ಬರ ಘಾತ ಮಾಡಪೇ ಉದ್ಯೋಗ ಮಾಡಿ ದುಡ್ಡು ಗಳಿಸಿದರೆ—ಅದೇನು ಪಾಪವಲ್ಲಾ ! ಮನೆಗೆ ಬರುವ ಜನಗಳ ಮನಸ್ಸು ವಲಿಸಿ, ಅವರನ್ನು ಸಂತೋಷಗೊಳಿಸು ವದು ಇದೊಂದು ಪುಣ್ಯದ ಕೆಲಸವೆಂದೇ ತಿಳಿ.

**ಶತತಾರ**—ಸಾಕು-ಸಾಕು—ಇಂತಹ ಪುಣ್ಯದ ಮಾತುಗಳು. ನಿನಗೆ ನಾನು ಇಷ್ಟೇ ಹೇಳುತ್ತೇನೆ.

ರಾಗ—ಮಾಂಡ ತಾಳ—ಧೂಮಾಳಿ

ನೀಚವಾದುದೆಮ್ಮಯ ಜನ್ಮ ಸಖಿಯೇ ॥ ಶುಚಿಭಾವವಿಲ್ಲದೆ ಮನದೇ । ಸದಾ ಕುಹಕ ಭಾವ ತೋರ್ಪವೇ । ಬಾಹ್ಯಸು ಹಾಸ್ಯತೋ । ರಿಯುಂತರಂಗದಿ ಕಪಟ ॥ ತನದೇ ಮೋಹಜಾಲಬೀರುತೆ ವಿನಯಾ । ಭಾವದೀ ಮೋ । ಸಾಮಾಳ್ಪೆವೇ ॥ ೨ ॥

**ಚಿತ್ರಾಂಗದಾ**—ಏನೇ ನೀನು ಹಾಗೆ ಮಾಡುವದಕ್ಕಿಂತ ಹೀಗೆ ಮಾಡು. ಈಚೀಗೆ ನಮ್ಮ ಜಾತಿಯ ಹುಡುಗಿಯರಿಗೆ ಲಗ್ನ ಮಾಡಿಕೊಳ್ಳುವ ಹುಚ್ಚು ತಲೆಯಲ್ಲಿ ಸೇರ ಹತ್ತಿದೆ ; ಅವರಂತೆ ನೀನಾದರೂ ಅವರ ಕೂಡ ಲಗ್ನವನ್ನು ಬೆಳೆಸು.

**ಶತತಾರ**—ಲಗ್ನವಲ್ಲದೇ ಇದಕ್ಕೇನು ಅನ್ನುವೆ ?

ರಾಗ-ಜಲ್ಲಾ ತಾಳ-ಧೂಮಾಳಿ

ಸತ್ಯದಿ ಸುವಿಚಾರಾ ಪೇಳ್ವೆ । ಪರಿಣಯ ಪಾವನರೀತಿ ಯುವಿಮುಲೆ ॥ ಪಲ್ಲ ॥
ವೈವಾಹಿಕದಾ ಹೋಮಮಂತ್ರಗಳ್ । ಅಂತಃಪಠ ಅಕ್ಷತಾದಿ ವಿಧಿಗಳ್ ಜೀವಜೀವಕೆ ಪೋಷಕ ವಿಹವೇ ॥ ೧ ॥

**ಚಿತ್ರಾಂಗದಾ**—ಒಳ್ಳೇದವ್ವಾ, ನೀನು ಶಾಲೆಯಲ್ಲಿ ಓದಿ, ಮಾತನಾಡುವದನ್ನು ಕಲಿತು, ಜಾಣೆಯಾಗಿರುವೆ! ನೀನು ನನಗೆ ಸೋಲುವಿಯಾ? ಆನಂದ ಶೇಟರ ಹೆಂಡತಿಯಾಗಿಯೇ - ಆನಂದದಿಂದಿರು. ಅಂದರಾಯಿತು. ಆದರೆ-ಒಂದು ಮಾತು ಹೇಳುತ್ತೇನೆ ನಿನಗೆ, ಅದೂ ನೀನು ನನಗೆ ಬಾಲ್ಯ ಗೆಳತಿಯೆಂದು ಹೇಳುತ್ತೇನೆ. ಆನಂದಶೇಟರ ಸ್ವಭಾವವು ಚಮತ್ಕಾರವಾದದ್ದು—ಅಂದಮೇಲೆ ನೀನು ಎಚ್ಚರದಿಂದಿರು-ತಿಳಿಯಿತೆ? ನನಗೆ ಹೊತ್ತಾಯಿತು. ನಾನು ಹೋಗುವೆನು-ಮನೆಯಲ್ಲಿ ತುರಾಯಿ ಮಾಡುವದು ಹಾಗೆ ಬಿಟ್ಟು ಬಂದಿದ್ದೇನೆ.

**ಶತತಾರಾ**—ಎಷ್ಟು ತುರಾಯಿ ಮಾಡುವೆಯೋ?

**ಚಿತ್ರಾಂಗದಾ**—ನಾನೇನು ನಿನ್ನನ್ನು ಒಬ್ಬಳನ್ನೆ ಬಿಟ್ಟು ಹೋಗುವದಿಲ್ಲಾ; (ಆಚೆಗೆ ನೋಡಿ) ಅದೋ ನೋಡು-ನಿನ್ನ ನೂತನ ಯಜಮಾನರು. (ತಾಳ ತಟ್ಟಿ) ಅಲ್ಲವ್ವಾ-ನಿನ್ನ ಪತಿದೇವರೇ ಬಂದರು. ಇನ್ನಾದರೂ ನಾನು ಹೋಗಲೇ?

**ಶತತಾರಾ—ತಿಳಿಯುವದು!** ಸಾಕು ನಿನ್ನ ಚೇಷ್ಟೆ-ಸಾಯಂಕಾಲ ಬರುವಿಯ ಲ್ಲವೇ? ಹಾಗಾದರೆ ಹೋಗು (ಸ್ವಗತ) ಇದೇನು? ದಿನಾಲೂ ಬರುವ ಸಮಯವಲ್ಲಾ ಇದು! ಜೊತೆಯಲ್ಲಿರುವವರಾರು? ನಂದನ ಶೇಟರು. ಆದರೆ ಸವಾರಿಯ ಮುಖಚಿನ್ಹವು ಸರಿಯಾಗಿ ಕಾಣುವದಿಲ್ಲ. ನಿನ್ನೆ ರಾತ್ರಿ ಸತ್ಯನಾರಾಯಣನ ಗಡಿಬಿಡಿಯಲ್ಲಿ ಅವರೊಡನೆ ಮಾತಾಡಲು ಅವಕಾಶ ಶಿಕ್ಕಲಿಲ್ಲ, ಅದಕ್ಕೋಸ್ಕರ ಕೋಪಿಸಿರಬಹುದು. (ಯೋಚಿಸಿ) ಹೌದು-ಹೌದು ಹಾಗೇ ಇರಬೇಕು. (ಆನಂದಶೇಟ ನಂದನಶೇಟರು ಬರುವರು) ನಂದನಶೇಟರೇ, ಈ ದಿವಸದ ಹವೆಯಲ್ಲಿ ಸ್ವಲ್ಪ ಶಕೆ (ಆನಂದಶೇಟರ ಕಡೆಗೆ ವಾರೆನೋಟ ಬೀರಿ) ಹೆಚ್ಚಾಗಿದೆ ಯಲ್ಲವೆ?

**ನಂದಶೇಟ**—ಅದಕ್ಕೆ ಕಾರಣ ಬಿಸಿಲಿನ ತಾಪ ! ಬಿಸಲು ಕಡಿಮೆಯಾದರೇ-ಅದು ಕಡಿಮೆಯಾಗುವದು.

**ಆನಂದ**—ಈ ಚೇಷ್ಟೆಯ ಮಾತುಗಳು ನನಗೆ ಬೇಡ. ಈಗಿಂದೀಗಲೆ ಯಾವುದಾದರೊಂದು ನಿರ್ಣಯವಾಗಲೇಬೇಕು. (ಒಬ್ಬರಿಗೊಬ್ಬರು ಮಾತಾಡುತ್ತಾರೆ.)

**ಶತತಾರಾ**—(ಮುಗುಳು ನಗೆ ಬೀರುತ್ತ)ಮೆಲ್ಲಗೆ ಮಾತಾಡಿರಿ – ಎಲ್ಲಿಯಾದರೂ ನನ್ನ ಕಿವಿಗಳಿಗೆ ಕೇಳಿಸೀತು ! ನನ್ನ ಕಿವಿಗಳು ತೀರ ತೀಕ್ಷ್ಣವಾಗಿವೆ. ಕಿವಿ-ಕಿವಿ ಕಚ್ಯಾಡಲಿಕ್ಕೆ ನಿಮಗೆ ಹೊರಗೆ ಸಮಯ ದೊರೆಯಲಿಲ್ಲವೇ ? ಸಾಗಲಿ - ಸಾಗಲಿ - ನಿಮ್ಮ ಮಾತು - ನಾನು ಬರುತ್ತೇನೆ (ಹೋಗ ತೊಡಗುವಳು)

**ನಂದನ**—ಛೆ–ಛೇ ಹಾಗೇನೂ ಇಲ್ಲ. ನಿನ್ನೆ ಈತನು ನಿಮಗೆ ತನ್ನ ಭಾವ ಚಿತ್ರ ಕೊಟ್ಟಿಲ್ಲವೆ ? ಅದನ್ನು ನಾನೊಂದು ಸಲ ನೋಡಬೇಕೆಂದಿದ್ದೇನೆ.

**ಶತತಾರಾ** —ನನಗೆ ಕೊಟ್ಟಮೇಲೆ ನೀವು ಅದನ್ನು ನೋಡಬೇಕೆಂದರೆ, ಅದರಲ್ಲಿ ಏನೋ ವಿಶೇಷವಿರಲೇಬೇಕು. ಒಳ್ಳೇದು ತೋರಿ ಸುತ್ತೇನೆ. (ಆನಂದ ಶೇಟರ ಕಡೆಗೆ ಓರೆನೋಟ ನೋಡುತ್ತ) ಕಣ್ಣು ದೊಡ್ಡದಾಗಿ ಮಾಡುವ ಕಾರಣವಿಲ್ಲಾ !—(ಭಾವಚಿತ್ರ ತರಲು ಹೋಗುವಳು)

**ನಂದನ**—ಆನಂದಶೇಟ, ನೋಡಿದಿಯಾ ? ಅವಳು ತರುವುದಕ್ಕೇ ಹೋದಳು. ಕೊಟ್ಟಮೇಲಾದರೂ ನಿನ್ನ ಸಂಶಯ ನಿವಾರಣೆಯಾಗುವುದೇ ?

**ಆನಂದ**—ಹೌದಯ್ಯಾ-ನೀನು ಅನ್ನುವಂತೆ ಆಗುವುದೇನೋ ನಿಜ. ಕಾರಣ ವಿಲ್ಲದೆ ಇವಳಲ್ಲಿ ದೋಷ ಕಂಡು, ನಾನು ತಪ್ಪುಗಾರನಾದೆನು. ಆದದ್ದು ಆಗಿಹೋಯಿತು. ಆದರೆ ಇನ್ನು ಮೇಲೆ ಇವಳ ಮುಂದೆ ಈ ವಿಷಯ ತೆಗೆಯಬೇಡ. ಇಲ್ಲವಾದರೆ ನನ್ನ ದುರ್ದೆಸೆಗೆ ಪಾರಾವಾರವೇ ಇಲ್ಲದಂತಾಗುವದು.

**ಶತತಾರಾ**—(ಯೋಚಿಸುತ್ತ ಬರುವಳು) (ಸ್ವ) ಆ ಕಪಾಟಿನಲ್ಲಿಕಾಣುವದಿಲ್ಲ. ಹಾಗಾದರೆ ಎಲ್ಲಿಟ್ಟೆನು? ಹೌದು ನಿನ್ನೆ ನಾನು ಬಂದು ಆ ಶೃಂಗಾರ

ಪೆಟ್ಟಿಗೆಯು ಹತ್ತಿರ ಹೋದೆನು. ಆದರ ಮೇಲೆಯೇ ಇಟ್ಟಿರಬಹುದು. (ಹೋಗುವಳು)

**ನಂದನ**—ಇನ್ನು ಮುಂದಾದರೂ ನೀನು ಹೀಗೆ ಇಲ್ಲದ ಸಂಶಯ ತಕ್ಕೊಳ್ಳುತ್ತಾ ಹೋಗಬೇಡಾ!

**ಆನಂದ** ಛೆ-ಛೆ! ಇನ್ನು ಮೇಲೆ ಎಂದಿಗೂ—ಸ್ವಪ್ನದಲ್ಲಿ ಕೂಡ ಸಂಶಯ ಬರುವ ಹಾಗಿಲ್ಲ. ಈ ದಿವಸ ನಮಗೆ ಮಂಗಳಾರತಿಯೂ ಚನ್ನಾಗಿ ಆಯಿತು. ಆದರೆ ಅವಳ ಮುಂದೆ ಹೇಳಬೇಡಪ್ಪಾ, ಅದೋ ನೋಡು ಅವಳ ಕಿವಿಗಳೂ ಇತ್ತಕಡೆಗೇ ಇವೆ!

**ಶತತಾರಾ**—(ಪ್ರವೇಶಿಸುವಳು) (ಸ್ವ) ಅಂದರೆ ಎಲ್ಲಿಯೂ ಇಲ್ಲವಲ್ಲ! ಎಲ್ಲಿ ಇಟ್ಟೆನು? ಏನು ಚಮತ್ಕಾರವು! ಹಾ ಈಗ ತಿಳಿಯಿತು. ಮಹಾರಾಜ ನೀವೆ ಏನಾದರೂ ಮದ್ದು-ಮಾಟ ಮಾಡಿರಬಹುದು. ಇದೇ ನಿಜ. ಇಲ್ಲವಾದರೆ ಇಲ್ಲಿಯೇ ಇಟ್ಟ ಭಾವಚಿತ್ರವು ಹೇಗೆ ಇಲ್ಲವಾಗುವದು? ಯಾಕೆ ನಂದನಶೇಟರೇ—ನಾನು ಹೇಳುವದು ನಿಜವಲ್ಲವೇ?

**ನಂದನ**—ಇಲ್ಲಾ ಪ್ರಮಾಣವಾಗಿಯೂ ಅದು ನಮ್ಮ ಹತ್ತರವಿಲ್ಲ. ನೀವೇ ಹುಡುಕಿರಿ. ಎಲ್ಲಿಯಾದರೂ ಇಟ್ಟಿರಬಹುದು.

**ಆನಂದ**—ಯಾಕೆ ನನ್ನ ಸಂಶಯವು ನಿಜವೋ ಸುಳ್ಳೋ. ಎಲವೋ ನನ್ನ ತರ್ಕವು ಎಂದಿಗೂ ಸುಳ್ಳಾಗದು. ನಾನು ಸುಮ್ಮನೆ ಸಂಶಯ ತಕೊಳ್ಳ ತಕ್ಕವನೇ? (ಶತತಾರಗೆ) ಶತತಾರೇ—ನಾವೇನು ಮೊದ್ದುಮಾಟ ಮಾಡತಕ್ಕವರಲ್ಲ.

**ನಂದನ**—(ಅವನನ್ನು ತಡೆದು) ಎಲವೋ ಅವಳು ಪರಿಹಾಸ್ಯ ಮಾಡುತ್ತಿರ ಬಹುದು. ಅದಕ್ಕೋಸ್ಕರ ಸ್ವಲ್ಪ ತಡೆ. ಮಾತಾಡಬೇಡ!

**ಶತತಾರೆ**—ಎಲ್ಲಿಯೂ ಇಲ್ಲವಲ್ಲಾ. ಎಲ್ಲಿ ಬಿದ್ದಿರುವದೋ ಅರಿಷ್ಟವು-ಯಾರಿಗೆ ಗೊತ್ತು?

**ಆನಂದ**—ಅದೋ ನೋಡಿದೆಯಾ-ನಾನು ಪ್ರೇಮದಿಂದ ಕೊಟ್ಟ ಭಾವ ಚಿತ್ರಕ್ಕೆ ಇವಳು ಅರಿಷ್ಟವೆನ್ನುತ್ತಾಳೆ.

**ಶತತಾರಾ**—(ಆನಂದಶೇಟರಿಗೆ) ನಿಜವಾಗಿಯೂ ಎಲ್ಲಿ ಇಟ್ಟಿರುವೆನೋ ಸಿಕ್ಕಲೇಯಿಲ್ಲ.

**ಆನಂದ**—ಅದು ಸಿಕ್ಕುವದಿಲ್ಲವೆಂದು ನನಗೆ ಗೊತ್ತೇಯಿದೆ.

**ಶತತಾರಾ**—(ನಗುತ್ತ) ಗೊತ್ತಿರುವದಾದರೆ ಕೊಡಿ-ಎಲ್ಲಿರುವದು?

**ಆನಂದ**—ಈ ಸೋಗಲಾಡಿತನಕ್ಕೆ ಮರುಳಾಗತಕ್ಕ ಗೃಹಸ್ಥನು ನಾನಲ್ಲ!

**ಶತತಾರಾ**—ಅಮ್ಮಯ್ಯಾ ಈಗ ಮಾತ್ರ ಇವರಿಗೆ, ನಿಜವಾಗಿಯೂ ಕೋಪ ಬಂತು. ನನಗೆ ಭಯವಾಗುವದು ಹೇಳಿರಿ? ಎಲ್ಲಿದೆ ಆ ಭಾವಚಿತ್ರವು?

**ಆನಂದ**—ಇಂತಹ ಪರಿಹಾಸ್ಯದಿಂದಲೇ ನೀವು ಜನಗಳ ಪ್ರಾಣ ತಕ್ಕೊಳ್ಳುವುದು-ತಿಳಿಯಿತೆ? ಮತ್ತು ಇಂತಹ ಪರಿಹಾಸ್ಯದಿಂದಲೆ ಆ ಭಾವಚಿತ್ರವನ್ನು ಮತ್ತೊಬ್ಬರಿಗೆ ಕೊಟ್ಟಿರಬಹುದಲ್ಲವೆ?

**ಶತತಾರಾ**—ಮತ್ತೊಬ್ಬನಿಗೆ ಅಂದರೆ, ಯಾರಿಗೆ ಕೊಟ್ಟಿರುವೆನು?

**ಆನಂದ**—ನೀನು ಯಾರಿಗೆ ಕೊಟ್ಟಿರುವೆಯೋ ಅವರಿಗೆ! ಇಂದೇ ಸ್ವಲ್ಪ ಹೊತ್ತಿನ ಕೆಳಗೆ ನಾನು ಆ ಭಾವಚಿತ್ರವನ್ನು ಅವರ ಕೈಯ್ಯಲ್ಲಿ ನೋಡಿದೆ.

**ಶತತಾರಾ**—ಇದೋ ನಾನಿದನ್ನು ಸಹಿಸಲಾರೆ! ನಾನು ಯಾರಿಗೆ ಕೊಟ್ಟದ್ದು? ಅವರ ಹೆಸರೇನು?

**ಆನಂದ**—ಹೆಸರು ಕೇಳುವದಕ್ಕೆ ಮರೆತೆನು. ಆದರೆ ಅವರ ಮುಖಚರ್ಯೆಯು ಮಾತ್ರ ಚನ್ನಾಗಿ ನೆನಪಿನಲ್ಲಿರುವದು.

**ಶತತಾರಾ**—ಹಾಗಾದರೆ ಇದು ಬರೀ ವಿನೋದವೇ ನಡೆದಿರುವದೋ ನಡೆಯಲಿ—ಹಾಗಾದರೆ—(ನಗುವಳು)

**ಆನಂದ**—ನಗು-ನಗು ನಾನಾದರೂ ಇದಕ್ಕೆ ಪ್ರತಿಕಾರ ಮಾಡದೆ ಇರಲಾರೆ! ನೆನಪಿನಲ್ಲಿರಲಿ! ತಿಳಿಯಿತೇ?

**ಶತತಾರಾ**—ನಡೆಯಲಿ ನಾನು ಮಧ್ಯದಲ್ಲಿ ಮಾತೇ ಆಡುವದಿಲ್ಲ. ಹೌದು ನಾನು ನಿಮ್ಮ ಅಪಮಾನ ಮಾಡಬೇಕೆಂತಲೇ ಆ ಭಾವಚಿತ್ರವನ್ನು ಮತ್ತೊಬ್ಬರಿಗೆ ಕೊಟ್ಟೆ. ಹಾಗೇ ತಾವು ತಿಳಿಯಿರಿ! ಇನ್ನಾದರೂ ಆಯಿತೇ?

**ಆನಂದ**—ತಿಳಿಯುವುದೇನನ್ನು? ನಿಜವಾಗಿಯೂ ನೀನು ಕೊಟ್ಟಿರುವಿ. ನಾನು ಇವೇ ಕಣ್ಣುಗಳಿಂದ ನೋಡಿದ್ದೇನೆ. ಬರಿಯ ಕೇಳಿಕೆಯ ಮಾತಲ್ಲ ಇದು.

**ಶತತಾರ**—ನಂದನಶೇಟರೇ–ಕೆಲವು ವೇಳೆ ಇದು ಹೇಗೇ ಸಾಗತಕ್ಕದ್ದು. ಈಗ ನಾನು ಹೋಗುವೆನು. ಸ್ನಾನವಾಗಿ ಪೂಜಿಯಾಗಬೇಕು. ಅದೋ ಆ ಪೆಟ್ಟಿಗೆಯ ಮೇಲೆ ಪಟ್ಟಿಗಳಿರುವವು.

**ನಂದನ**—ಆದರೆ ಸ್ವಲ್ಪ ತಡೆಯಿರಿ—!

**ಶತತಾರಾ**—ಛೀ-ಛೀ ಬೇಡವೇ ಬೇಡಾ-ನನಗೆ ಎಲ್ಲವೂ ತಿಳಿಯಿತು.

ರಾಗ–ಅಡಾಣ–ತಾಳ ತ್ರಿವಟ

ನಾನರಿತೇ ನೀ ಭಾವಾ। ದೋಷವಿಪರೀತ ॥ ಪ ॥ ಬಲು ಚೋದ್ಯಮಾದ। ಲಾಲಿಸಿವಚನವ ॥ ಕಳವಳವಾಗಿ ಪೋದೆ। ಮೋಸವ ॥ ೧ ॥

**ಆನಂದ**—ನೋಡು ನೋಡು-ಎಷ್ಟು ದುರ್ಲಕ್ಷ ಮಾಡುವಳು! ಆ ಪೆಟ್ಟಿಗೆಯ ಮೇಲೆ ಪಟ್ಟಿ ಇರುವವು ಬೇಕಾದರೆ ತಿನ್ನು–ಸಾಕಾದರೆ ಬಿಡು, ಹೀಗೆ ಅಲ್ಲವೇ ಇದರ ಅರ್ಥವು. ಹೋಗು ಹೋಗು-ನಿನ್ನ ಎಲೆ ಪಟ್ಟಿಯನ್ನು ತಿನ್ನದಿದ್ದರೆ, ನಾವೇನು ಸತ್ತುಹೋಗುವುದಿಲ್ಲ. ನಡೆ ಮೊದಲು ಆ ಗೃಹಸ್ಥನ ಭೆಟ್ಟಿಯಾಗಿ ವಿಚಾರಿಸೋಣ! ನಂದನಶೇಟ ನಿನಗಾದರೂ ಮನದಟ್ಟಾಯಿತೋ ಇಲ್ಲವೋ ?

**ನಂದನ**—ಛೀ-ಛಿ-ಇನ್ನೂ ನನ್ನ ಮನಸ್ಸಿಗೆ ಒಪ್ಪಿಗೆ ಇಲ್ಲವಪ್ಪಾ! ಯಾಕಂದರೆ ಅವಳ ಮುಖದಲ್ಲಿ ಎಷ್ಟೂ ಕಪಟ ಕಾಣುವದಿಲ್ಲ, ಅಂದಮೇಲೆ ಹೇಗೆ ಒಪ್ಪಿಗೆಯಾಗಬೇಕು ?

**ಆನಂದ**—ಎಲೋ ಹುಚ್ಚಾ-ನಿನಗೆ ತಿಳಿಯುವದಿಲ್ಲಾ-ಕೇಳು. ಹಾಗಾದರೆ—

ರಾ—ಬಾಗೇಶ್ರೀ, ತಾಳ—ತ್ರಿವಟ

ಪಾರವಾರಿ ನಾಟ್ಯಗಾನ ನಿಪುಣೆ। ಕಪಟಮಾಯಜಾಲವಾ। ಬೀರುವಳೂ ॥ ಪಲ್ಲ ॥ ನಟಿಸುತೆ ಬಹಿರಂಗ ಪ್ರೇಮವಾ ಕುಟಿಲತೆಯಂತರಂಗ ತೋರ್ಪಳೂ ॥

## ಎರಡನೇ ಅಂಕ ಸಮಾಪ್ತ

# ಮೂರನೇ ಅಂಕ.

## ೧ ನೇ ಪ್ರವೇಶ

(ಸ್ಥಳ–ವಿಜಯ ರಾಯನ ಮನೆ. ಪೂರ್ಣಿಮಾ ದೇವಿಯು ಬರುವಳು. ಹತ್ತಿರ ವೃಶ್ಚಿಕ)

**ಪೂರ್ಣಿಮಾ**—ಶ್ರವಣಸೇಟರ ಹೆಂಡತಿಗೆ ಕಾಗದ ಬರೆದಿದ್ದೆ, ಕನಿಷ್ಟ ಪಕ್ಷ ಇಂದು ಅದರ ಉತ್ತರ ಬರಬೇಕಿತ್ತು; ಯಾಕೆ ಬಂದಿರಲಿಕ್ಕಿಲ್ಲ; ಅಥವಾ ಮಧ್ಯದಲ್ಲಿಯೋ ಬಚ್ಚಿಟ್ಟರೋ-ಹೇಗೆ ತಿಳಿಯಬೇಕು ?

**ವೃಶ್ಚಿಕ**—ಅಮ್ಮನವರೇ, ದಿವಾನ ಖಾನೆಯಲ್ಲಿ ಜಮಖಾನೆ ಹಾಸಲು ಹೋಗುತ್ತೇನೆ.

**ಪೂರ್ಣಿಮಾ**—ಸ್ವಲ್ಪ ಈಚೆಗೆ ಬಾ— ನೀನೊಬ್ಬ ಹೆಚ್ಚಿನ ಸುಳ್ಳುಗಾರನೇ ಗಂಟು ಬಿದ್ದೀ !

**ವೃಶ್ಚಿಕ**—ಯಾಕೆ ಅಮ್ಮನವರೇ ?

**ಪೂರ್ಣಿಮಾ**—ನೀನು ಸತ್ಯ ಹೇಳುವುದೇ ಇಲ್ಲ; ಆದರೂ ಕೇಳುತ್ತೇನೆ. ನಿನ್ನಿನ ದಿವಸ ಯಾರಾದರೂ ಪತ್ರ ತಕ್ಕೊಂಡು ಬಂದಿದ್ದರೋ ಹೇಗೆ ? ನೀನು ಇಲ್ಲವೆಂದು ಅನ್ನುವಿ, ಅದು ನನಗೆ ಗೊತ್ತು; ಆದರೂ ಪ್ರಮಾಣವಾಗಿ ಹೇಳು.

**ವೃಶ್ಚಿಕ**—ಅಮ್ಮನವರೇ-ನನಗೆ ನಿಜವಾಗಿಯೂ ಗೊತ್ತಿಲ್ಲ. ಯಾರು ಬರತಕ್ಕವರಿದ್ದರು ?

**ಪೂರ್ಣಿಮ**—ನಿನಗೇಕೆ ಬೇಕು ಆ ವಿಚಾರ? ಕೇಳಿದಷ್ಟು ಹೇಳುವುದಷ್ಟೇ ನಿನ್ನ ಕೆಲಸ !—

**ವೃಶ್ಚಿಕ**—ಹಾಗಾದರೆ ಅಮ್ಮನವರೇ ಯಾರು ಬಂದದ್ದನ್ನೂ ನಾನು ನೋಡಿಲ್ಲ

**ಪೂರ್ಣಿಮ**—ಹಾಗಿದ್ದರೆ ಬೆಳಿಗ್ಗೆ ಇವರು, ನಿನ್ನನ್ನು ಎಲ್ಲಿಗೆ ಕಳಿಸಿದ್ದರು?

**ವೃಶ್ಚಿಕ**—(ಸ್ವ) ಆ ಸಂಗತಿಯನ್ನು ಇವರಿಗೆ ! ತಿಳಿಸಬೇಡವೆಂದು ರಾಯರ ಅಪ್ಪಣೆ-, ನಿಜವಾದ ಸಂಗತಿಯನ್ನು ಹೇಳಲೇ ಬೇಕೆಂದು ಇವರ ಅಪ್ಪಣೆ,- ಹೀಗೆ ಈ ಎರಡೂ ಅಪ್ಪಣೆಗಳ ನಡುವೆ ಸಿಕ್ಕು, ನಾನು

ಬೆಪ್ಪನಾಗಿದ್ದೇನೆ- (ಪ್ರಕಾಶ) ಅಮ್ಮನವರೇ ನನ್ನನ್ನೆಲ್ಲಿ ಕಳಿಸಿದ್ದರು. ಎಲ್ಲಿಯೂ ಇಲ್ಲವಲ್ಲ.

**ಪೂರ್ಣಿಮಾ**—ಸುಳ್ಳು ಮಾತಾಡಬೇಡ ! ಎಲ್ಲಿಗೆ-ಹೋಗಿದ್ದೆ ಹೇಳು !

**ವೃಶ್ಚಿಕ**—ನಾನೆಲ್ಲಿ ಹೋಗಿದ್ದೆ ಅಮ್ಮನವರೇ—ನಾಯಿಯನ್ನು ಅಡ್ಡಾಡಿಸ ಲಿಕ್ಕೆಂದು ಹೊರಗೆ ವಯಿದಿದ್ದೆನು. ನಿಮಗೆ ಯಾರು ಹೇಳಿದರು ?

**ಪೂರ್ಣಿಮಾ**—ನನಗೆ ಕರ್ಣಪಿಶಾಚಿ ಹೇಳಿತು ! ಆದರೆ ನೀನು ಎಲ್ಲಿಗೆ ಹೋಗಿದ್ದೆ-ಅದನ್ನು ಹೇಳುವಿಯೋ ಇಲ್ಲವೋ ?

**ವೃಶ್ಚಿಕ**—ಇಲ್ಲ ಅಮ್ಮನವರೇ ನಾನೆಲ್ಲಿಯೂ ಹೋಗಿರಲಿಲ್ಲಾ.

**ಪೂರ್ಣಿಮಾ**—ಹೇಳುವದಿಲ್ಲವೆ? ಬಿಡು ಹಾಗಾದರೆ ! ನಿಮ್ಮನ್ನೆಲ್ಲ ಈ ಮನೆ ಯಿಂದ ಹೊರಗೆ ಹಾಕಿದಾಗಲೇ ನನಗೆ ಸುಖವಾದ ನಿದ್ರೆ ಬರುವದು. ಹೊರಗೆ ಯಾರು ಮಾತಾಡುತ್ತಾರೆ? ಧ್ವನಿಯು ಗುರುತಿನಂತೆ ಕಾಣ ವದು ! ಯಾವನಾದರೂ ಮುತ್ಯಾಳನು ಬಂದಿರಬಹುದು. ಇಂಥವರ ಸಹವಾಸದಿಂದಲೇ ಇವರ ಬುದ್ಧಿ ಕೆಟ್ಟು ಹೋಗಿರುವದು. ತಡೆ. ಏನು ಮಾತಾಡುತ್ತಾರೋ ನೋಡೋಣ !

**ವೃಶ್ಚಿಕ**—ಅಮ್ಮನವರೆ ತಮ್ಮದು ನನ್ನ ಮೇಲೆ ವಿಶ್ವಾಸವಿದ್ದರೆ—

**ಪೂರ್ಣಿಮಾ**—ಸ್ವಲ್ಪ ಸುಮ್ಮನಿರೋ-ಅವರು ಮಾತನಾಡುವದು ನನಗೆ ಕೇಳಿ ಸಬಾರದೆಂದು; ಹೀಗೆ ವಡ-ವಡ ಹಚ್ಚಿರುವಿಯಾ ?

**ವೃಶ್ಚಿಕ**—ಇಲ್ಲ ಅಮ್ಮನವರೆ ನಾನೇತಕ್ಕೆ ಹಾಗೆ ಮಾಡಲಿ ?—(ಪ್ರತಿಪದೆಯು ಬರುವಳು.)

**ಪೂರ್ಣಿಮಾ**—ಹಾ! ಬಂದೆಯಾ ಇಷ್ಟೊತ್ತು ಎಲ್ಲಿ ಹೋಗಿದ್ದೆ ಮೆರೆಯ ಲಿಕ್ಕೆ? ಮತ್ತೆ ನನ್ನ ಅಪ್ಪಣೆ ಇಲ್ಲದೆ ಹೊರಗೆ ಯಾಕೆ ಹೋದೆ ನೀನು, ಹೇಳು ಮೊದಲು ?

**ಪ್ರತಿಪದೆ**—ನಿನ್ನೆ ನಮ್ಮ ಮನೆಗೆ ಬಂದ ಆ ಬಡಪ್ರಾಣಿಗೆ ತಾವು ಇಲ್ಲ ದ್ದೊಂದು ಮಾತಾಡಿದಿರಿ, ನನಗೂ ಏನೇನೋ ಅಂದಿರಿ. ಅವಳನ್ನು ಸಮಾಧಾನ ಮಾಡಬೇಕೆಂದು ಅವಳಲ್ಲಿ ಹೋಗಿದ್ದೆನು, ಅಷ್ಟೇ !

**ಪೂರ್ಣಿಮಾ**—ತಿಳಿಯಿತು-ತಿಳಿಯಿತು-ನೀನು ಹೋದ ಕಾರಣವು ! ನಿಜ ವಾದ ಸಂಗತಿಯು ಹೊರಬೀಳುವದೆಂದು, ಅವಳನ್ನು ತಿದ್ದುವುದಕ್ಕೆ

ಹೋಗಿದ್ದೆಯಾ ? ಇರಲಿ-ಇರಲಿ ನಾನು ಭರಣೀದೇವಿಯವರನ್ನೇ ವಿಚಾರಿಸಿ ನಿಮ್ಮ ಗುಟ್ಟನ್ನು ಬೈಲಿಗೆಳೆಯುತ್ತೇನೆ. ಆದರೆ ನನ ಪತ್ರಕ್ಕೆ ಇನ್ನೂ ಉತ್ತರವೇಕೆ ಬರಲಿಲ್ಲಾ. ಮಧ್ಯದಲ್ಲಿ ನೀನೇ ಏನಾ ವರೂ ಮೋಸ ಮಾಡಿದೆಯೋಯೇನು ಚಾಂಡಾಲಿಯೇ ? ನನ್ನ ಪ್ರತಿ ಯೊಂದು ಕೆಲಸದಲ್ಲಿ ನೀನು ಹೀಗೇ ಕಲ್ಲು ಹಾಕುತ್ತೀ ! ತಡೆ ತಡೆ.

**ಪ್ರತಿಪದೆ**—ಅಮ್ಮನವರೇ ಮೊದಲು ನಾನು ಹೇಳುವುದನ್ನಾದರೂ ಕೇಳಿರಿ. ನಾನು ತಮ್ಮ ಕೆಲಸ ಮಾಡುವದಕ್ಕಾಗಿಯೇ ಹೋಗಿದ್ದೆನು !

**ಪೂರ್ಣಿಮಾ**—ಏನು ? ನನ್ನ ಕೆಲಸ ಮಾಡುವದಕ್ಕಾಗಿ ಹೋಗಿದ್ದೆಯಾ ? ಅದಾವುದು ?

**ಪ್ರತಿಪದೆ**—ತಾವು ಯಜಮಾನರ ವಿಷಯವಾಗಿ ಸಂಶಯ ತಕ್ಕೊಳ್ಳಲಿಲ್ಲವೇ- ಅದು ನನಗೂ ನಿಜವಾಗಿ ಕಾಣುವದು.

**ಪೂರ್ಣಿಮಾ**—ಅದು-ಹೇಗೆ ? ಹೇಗೆ ? ಹೇಳು ನೋಡುವಾ !

**ಪ್ರತಿಪದೆ**—ನಾನು ಈ ಮೊದಲೆ ಹೇಳಲಿಲ್ಲವೆ ಸಪ್ತಮಿಯ ಭೇಟಿಗೆ ಹೋಗಿ ದ್ದೆನೆಂದು ಅವಳು ನನಗೆ ಒಂದು ಚಮತ್ಕಾರದ ಸಂಗತಿಯನ್ನು ಹೇಳಿದಳು.

**ಪೂರ್ಣಿಮಾ**—(ಅಚ್ಚರಿಯಿಂದ) ಅದೇನು ? ಬಾ ಇಲ್ಲಿ ನನ್ನ ಹತ್ತಿರ ! ಅದಾವ ಸಂಗತಿಯನ್ನು ಹೇಳಿದಳು.

**ಪ್ರತಿಪದೆ**—(ಅತ್ತಿತ್ತ ನೋಡುತ್ತ) ಧಣಿಯರು ಇಂದು ವೃಶ್ಚಿಕನನ್ನು ಅವಳ ಕಡೆಗೆ ಕಳಿಸಿದ್ದರಂತೆ !

**ಪೂರ್ಣಿಮಾ**—ಏನಂದೆ ? ವೃಶ್ಚಿಕನು ಅವಳ ಕಡೆಗೆ ಹೋಗಿದ್ದನೇ ? ಅಮ್ಮಯ್ಯಾ ಏನು ಕಾರಸ್ಥಾನವಿದು ? ಎಲಾ ಸುಟ್ಟಮೋರಿ ವೃಶ್ಚಿಕಾ-! ಇರಲಿ ಅವನನ್ನೇಕೆ ಕಳಿಸಿದ್ದರು ?

**ಪ್ರತಿಪದೆ**—ನಿಮ್ಮ ಯಜಮಾನರು ಈ ದಿವಸ ಸಂಜೆಯ ಮಬ್ಬುಗತ್ತಲಾದ ಮ್ಯೋಲೆ, ಸಪ್ತಮಿಗೆ ಈ ಮಾವಿನ ತೋಪಿನ ಮೂಲೆಯ ಹತ್ತಿರ ಬರಲಿಕ್ಕೆ ಹೇಳಿದ್ದಾರಂತೆ.

**ಪೂರ್ಣಿಮಾ**—ಏನು ? ಕತ್ತಲೆಯಾದ ಕೂಡಲೇ ಭೇಟಿಯಾಗುವುದಕ್ಕೆ ಹೇಳಿದ್ದಾರೆಯೆ ? ಅಮ್ಮಯ್ಯಾ, ನಾನಾದರೂ ನಿನಗೆ ಇದನ್ನೇ ಹೇಳುತ್ತಿದ್ದೆನು ! ನಿನಗೆಲ್ಲಿ ತಿಳಿಯುವದು.

**ಪ್ರತಿಪದೆ**—ಇನ್ನೂ ಮುಂದೆ ಕೇಳಿರಿ !

**ಪೂರ್ಣಿಮಾ**—ಏನು ಎನದು ?

**ಪ್ರತಿಪದೆ**—ಅವಳಿಗೆ ಹೀಗೆ ಹೇಳಿದ್ದಾರೆ. ಸಾಯಂಕಾಲ ಯಾರಿಗೂ ತಿಳಿಯದಂತೆ. (ಚಾಕರನು ಬರುವನು.)

**ಸೇವಕ**—ಅಮ್ಮನವರೇ ಹೊರಗೆ ಒಬ್ಬ ಗೃಹಸ್ಥರು ಬಂದಿದ್ದಾರೆ. ಅವರು ಭಾವಚಿತ್ರದ ವಿಷಯವಾಗಿ ರಾಯರ ಸಂಗಡ ಮಾತಾಡಬೇಕೆನ್ನುತ್ತಾರೆ.

**ಪೂರ್ಣಿಮಾ**—ಏನು ? ಭಾವಚಿತ್ರದ ವಿಷಯಕ್ಕೆ ಮಾತಾಡುವದಿರುವದೇ ? ಏನೇ-ಅವರೇ ! ಅವರೇ–ನಾನು-ಹೇಳಿದಂತೆ ಅವರೇ–ಬಂದಿರಬೇಕು. ಈ ಗೃಹಸ್ಥನಿಂದ ಏನಾದರೂ ಶೋಧವಾಗುವದೋ, ತಿಳಿಯುವದೋ, ನೋಡೋಣ (ಆಳಿಗೆ) ಹೋಗು ಅವರನ್ನು ಒಳಗೆ ಬರುವದಕ್ಕೆ ಹೇಳು. (ಹೋಗುವನು) ಅಂತೂ ಈ ವ್ಯಕ್ತಿಕನು ಸಪ್ತಮಿಯ ಕಡೆಗೆ ಹೋಗಿದ್ದನಲ್ಲವೇ ? ಮತ್ತು ನಮ್ಮ ಪತಿರಾಜರು ಅವಳಿಗೆ ಈ ದಿವಸ ಸಾಯಂಕಾಲಕ್ಕೆ ಬರುವುದಕ್ಕೆ ಹೇಳಿದ್ದಾರೆಯೋ ? ಅವಳಿಗೆ ಮತ್ತೇನೇನು ಹೇಳಿದ್ದಾರೋ—?

**ಪ್ರತಿಪದೆ**—ಪಾಪ–ಸಪ್ತಮಿಯು ಬಹಳ ಗಾಬರಿಯಾಗಿರುವಳು. ಕತ್ತಲೆಯಲ್ಲಿ ಪರಪುರುಷನ ಭೇಟಿಯಾಗುವದು- ಅದೂ ಒಬ್ಬಳೇ, ಭರವಸೆ ಏನು? ಇದಲ್ಲದೆ ಅವಳಿಗೆ ಮುಸುಕು ಹಾಕಿಕೊಂಡು ಬರಲು ಹೇಳಿದ್ದಾರಂತೆ.

**ಪೂರ್ಣಿಮಾ**—ಹೌದು ಮುಸುಕು ಹಾಕಿಕೊಂಡು ಬಂದರಲ್ಲವೇ- ಈ ರಹಸ್ಯ ಯಾರಿಗೂ ಕಾಣಿಸದಿರುವದು. ಈ ರಹಸ್ಯವೇನೆಂಬುದು ಸಣ್ಣ ಹುಡುಗನಿಗೆ ಕೂಡ ತಿಳಿಯದಿರುವದಿಲ್ಲ. ಅದೋ ಆ ಗೃಹಸ್ಥರು ಬಂದರು. ನಾನು ಆ ಗೃಹಸ್ಥನಿಗೆ ಭೇಟಿಯಾಗಲೇ ಬೇಡವೇ ? ಭೇಟಿಯಾಗದೇ ಗತ್ಯಂತರವಿಲ್ಲ. ಪ್ರತಿಪದೇ- ನೀನು ಸ್ವಲ್ಪ ಆಚೆಗೆ

ಹೋಗು. ಅವರು ಹೋದಮೇಲೆ, ನೀನು ಎಲ್ಲ ವಿಷಯ ಹೇಳು ವಿಯಂತೆ. ಬನ್ನಿ- ಬನ್ನಿ. ಹೀಗೆ ಕೂಡಿ.

(ಆನಂದ ಶೇಟನು ಬರುವನು)

**ಆನಂದ**—ನನಗೆ ವಿಜಯರಾಯರಿಗೆ ಭೇಟಿಯಾಗಿ, ಕೆಲವು ಸಂಗತಿಗಳ ಬಗ್ಗೆ ಅವರೊಡನೆ ಮಾತಾಡಬೇಕಾಗಿದೆ! ಅವರು ಯಾವಾಗ್ಗೆ ಭೇಟಿಯಾಗ ಬಹುದು.

**ಪೂರ್ಣಿಮಾ**—ಭಾವಚಿತ್ರದ ವಿಷಯವಾಗಿಯೇ ಇರಬಹುದು.

**ಆನಂದ**—ನನ್ನ ಭಾವಚಿತ್ರವೆಂದು ನಾನು ಹೇಳಿಕೊಳ್ಳಲು ಸಂಕೋಚವಾಗು ತ್ತದೆ. ಆದರೂ ಪ್ರಸಂಗ ಬಂದದ್ದರಿಂದ ಹೇಳಬೇಕಾಗಿದೆ. ಅದನ್ನು ನಾನು ಒಬ್ಬ ನಾಯಕಸಾನಿಯ ಹುಡುಗಿಯ ಕೈಯ್ಯಲ್ಲಿ ಕೊಟ್ಟಿದ್ದೆನು. ಆ ಭಾವಚಿತ್ರದ ಮಹತ್ವವು ನನಗೆ ವಿಶೇಷವಾಗಿರುವದೆಂದು ತಾವು ತಿಳಿಯಕೂಡದು. ಆದರೆ ಕೆಲವೊಂದು ಸಂಗತಿಯ ಸಲುವಾಗಿ ಅದು ನನಗೆ ಅವಶ್ಯವಾಗಿ ಬೇಕಾಗಿರುವದು. ಅದರಮೇಲೆ ನನ್ನ ಜನ್ಮದ ಸುಖದುಃಖಗಳೇ ಅವಲಂಬಿಸಿವೆ.

**ಪೂರ್ಣಿಮಾ**—ನನಗೆ ಎಲ್ಲವೂ ತಿಳಿಯಿತು. ಆದರೆ, ಆ ಹುಡುಗೆಯು ಅತಿ ಚಲುವೆಯಲ್ಲವೆ ?

**ಆನಂದ**—ಹೌದು ಅತಿ ಚಲುವೆಯು; ಆದರೆ ನಾನು ಕೊಟ್ಟ ಭಾವಚಿತ್ರ ವನ್ನು ಅವಳು ಇನ್ನೊಬ್ಬನಿಗೆ ಕೊಟ್ಟಂತೆ ನನಗೆ ಸಂಶಯ ಬಂದಿ ರುವದು.

**ಪೂರ್ಣಿಮಾ**—ನಿಶ್ಚಯ-ನಿಶ್ಚಯ. ನನಗೂ ಹಾಗೆ ಅನಿಸಿತ್ತು, ನನಗೂ ಸಂಶಯ ಬಂದದ್ದೇನಂದರೇ—

**ಆನಂದ**—ಅವಳು ಆ ಭಾವಚಿತ್ರವನ್ನು ವಿಜಯರಾಯರಿಗೇ ಕೊಟ್ಟಳು! ಹೀಗೆ ಅಲ್ಲವೇ ?

**ಪೂರ್ಣಿಮಾ**—ಹೌದು ಹೀಗೇ !

**ಆನಂದ**—ಸರಿ ಹಾಗಾದರೆ ಸಂಶಯ ನಿವಾರಣೆಯಾದಂತಾಯಿತು ಇದಕ್ಕೂ ಹೆಚ್ಚು ಏನೂ ಬೇಕು ?

**ಪೂರ್ಣಿಮಾ**—(ಕಣ್ಣೀರು ತಂದು) ಆದರೆ ಅವಳು ನನ್ನ ಸಂಸಾರವನ್ನು ಮಾತ್ರ ಹಾಳು ಮಾಡಿದಳು.

**ನಂದನ**—(ಸ್ವಗತ) ಅಯ್ಯೋ ಪಾಪ. ಈ ಬಡಪಾಯಿಯು ಕಣ್ಣೀರು ತಂದಳು. ಇದರ ಮೇಲಿಂದ ಯಾವ ಅನುಮಾನವೂ ಉಳಿಯಲಿಲ್ಲ.

**ಪೂರ್ಣಿಮಾ**— ಒಳ್ಳೆಯದು ಆ ಹುಡುಗಿಯ ಹೆಸರೇನು?

**ಆನಂದ**—ಅವಳ ಹೆಸರು ಶತತಾರಾ.

**ಪೂರ್ಣಿಮಾ**—ಇರಲಿ ಆ ಜಾರಣಿಯ ಹೆಸರಾದರೂ ತಿಳಿಯಿತು.

**ಆನಂದ**—ಅವಳನ್ನು ನೀನು ಎಂದಾದರೂ ನೋಡಿದ್ದೀರಾ?

**ಪೂರ್ಣಿಮಾ**—ಶೇಟ್‌ಜೀಯವರೇ, ನಾನು ತಮಗೆ ಏನು ಹೇಳಲಿ ? ಇಂತಹ ವಿಷಯಗಳನ್ನು ಸ್ತ್ರೀಯರು ಪುರುಷರ ಕೂಡ ಮಾತಾಡಬಾರದು. ಇಲ್ಲವಾದರೇ, ನಾನು ನೋಡಿದ ಪ್ರಸಂಗವನ್ನು ಹೇಳಿಯೇ ಬಿಡುತ್ತಿದ್ದೆ !

**ಆನಂದ**—ಅಂದರೆ ಅಂತಹ ಯಾವ ಪ್ರಸಂಗವನ್ನು ನೀವು ನೋಡಿದಿರಿ ?

**ಪೂರ್ಣಿಮಾ**—ಹದಿನೇಳು ಹದಿನಾರು ವರ್ಷದ ತರುಣಿಯು ಪರಪುರುಷನ ಮೈಮೇಲೆ ಹೊರಳಾಡುತ್ತಿರುವ ಪ್ರಸಂಗಕ್ಕೆ ನೀವು ಏನನ್ನುವಿರಿ?

**ನಂದನ**—ಅಂದರೇ ಅವಳು ವಿಜಯರಾಯರ ಮೈಮೇಲೆ ಹೊರಳಾಡುತ್ತಿದ್ದಳೇ ?

**ಪೂರ್ಣಿಮಾ**—ಹೌದು. ಅವರ ಮೈಮೇಲೆ ಮತ್ತು ಹೆಗಲ ಮೇಲೆ, ಕೈ ಹಾಕಿ, ಮುಂದೆ ಹೇಳುವುದಕ್ಕೆ ನಾಚಿಕೆ ಬರುವದು; ಮತ್ತು ಈ ಕೃತಿಯು ಹಗಲು; ನಮ್ಮ ಮನೆಯ ಮುಂದೆ ನಡೆದದ್ದನ್ನು ನಾನೇ ನೋಡಿದ್ದೇನೆ ಪ್ರತ್ಯಕ್ಷ!

**ಆನಂದ**—ಅಯ್ಯೋ ಎಂತಹ ಲಜ್ಜೆಗೇಡಿತನ ಕೃತಿಯಿದು. (ಸ್ವ) ಶತತಾರೆ ನೀನು ಹೀಗೆ, ವಿಶ್ವಾಸಘಾತ ಮಾಡುವಿಯೆಂದು ನಾನು ಕನಸು ಮನಸ್ಸಿನಲ್ಲಿಯೂ ತಿಳಿಯಲಿಲ್ಲ. ಅಂತೂ ನೀನು ನಿನ್ನ ನಿಜರೂಪವನ್ನು ತೋರಿಸಿದೆ. ಪೂರ್ಣಿಮಾದೇವಿಯವರೇ ನಿಮ್ಮ ಸಹಾಯದಿಂದ ನನಗೆ ಎಲ್ಲ ವಿಷಯಗಳೂ ತಿಳಿದವು. ಇದು ನನ್ನ ಮೇಲೆ ತಮ್ಮದು ದೊಡ್ಡ ಉಪಕಾರ. ಆದರೆ ಕೊನೆಯದಾಗಿ ನಿಮ್ಮನ್ನು ಕೇಳುತ್ತೇನೆ. ಇದೆಲ್ಲ ನಿಜವಾದ ಸಂಗತಿಯೋ ?

**ಪೂರ್ಣಿಮಾ**— ಶೇಟಜೀಯವರೇ, ನಾನು ಈವರೆಗೆ ಹೇಳಿದ್ದು ಪ್ರತ್ಯಕ್ಷ ನೋಡಿದ್ದು, ಅಂದ ಮೇಲೆ ನಿಜವೆಂಬುದನ್ನು ಏನು ಹೇಳಲಿ? ಇದಲ್ಲದೆ ನಿಮ್ಮ ವಿಷಯವಾಗಿ ನನಗೆ ಚೆನ್ನಾಗಿ ಅನುಭವವಿರುವದು. ಏನು ಮಾಡುವದಕ್ಕೂ ಅವರು ಹಿಂದು ಮುಂದು ನೋಡುವದಿಲ್ಲ. ಇನ್ನು ನೀವು ಶತತಾರೆಯ ವಿಷಯವಾಗಿ ಮಾಡಬೇಕಾದ್ದನ್ನು ಮಾಡಿರಿ!

**ಆನಂದ**—ಅದನ್ನಂತೂ ಇನ್ನು ಮೇಲೆ ಮಾಡಲೇಬೇಕು. ಇರಲಿ ಸದ್ಯಕ್ಕೆ ಆ ಭಾವಚಿತ್ರವು ವಿಜಯರಾಯರ ಹತ್ತಿರವೇ ಇರುವದಲ್ಲವೇ?

**ಪೂರ್ಣಿಮಾ**—ಹೌದು ಅವರ ಹತ್ತಿರವೆ ಇದೆ. ಅದನ್ನು ನಾನು ಒಂದು ಕ್ಷಣಹೊತ್ತು ಕೈಯಲ್ಲಿ ತಕ್ಕೊಳ್ಳುವಷ್ಟರಲ್ಲಿ, ರಾಕ್ಷಸನಂತೆ ನನ್ನ ಮೈಮೇಲೆ ಬಂದು ನನ್ನ ಕೈಯಿಂದ ಅದನ್ನು ಕಸಿದುಕೊಂಡರು. ನನಗೂ ಸಂಶಯ ಬಂದಿದ್ದರಿಂದ ಅವರ ಮನಸ್ಸಿಗೆ ಹತ್ತುವಂತೆ ನಾನೂ ನಾಲ್ಕು ಮಾತು ಆಡಿದೆನು. ಆಗ್ಗೆ ಅವರು ತಿರುಗಿಬಿದ್ದು, ಇದು ನಿನ್ನ ವಿಟಪುರುಷನ ಭಾವಚಿತ್ರವೇ ಎಂದು ನಾನಾ ರೀತಿಯಿಂದ ನನ್ನನ್ನೇ ಹಿಯಾಳಿಸಿದರು. ಇದು ಮೋಸತನವಲ್ಲವೇ? ನೀವೇ ಹೇಳಿರಿ, (ಕಣ್ಣೀರು ಹಾಕುವಳು)

**ಆನಂದ**—ಪೂರ್ಣಿಮಾ ದೇವಿಯವರೇ, ನೀವು ಅಳಬೇಡಿರಿ. ಇದಕ್ಕೆ ನಾನೇ ಇನ್ನು ಸಾಕ್ಷಿದಾರನು. ನೀವು ದುಃಖಪಡಬೇಡಿರಿ. ನಾನು ಬರಲೇ-

**ಪೂರ್ಣಿಮಾ**—ಒಳ್ಳೇದು ಇನ್ನು ಮುಂದೆ ಇದರ ವಿಷಯವಾಗಿ ಹೆಚ್ಚು ತಿಳಿದರೆ ನನಗೂ ತಿಳಿಸಿರಿ.

**ಆನಂದ**—ಆ ವಿಷಯವಾಗಿ ನೀವು ಯೋಚನೆಯನ್ನೇ ಮಾಡಬೇಡಿ. ಒಳ್ಳೇದು ನಾನು ಬರುವೆನು. (ಹೋಗುವನು)

**ಪೂರ್ಣಿಮಾ**—(ಸ್ವ) ಪಾಪ ಒಳ್ಳೇ ಸರಳ ಸ್ವಭಾವದ ಮನುಷ್ಯರು. ಆದರೆ ನಮ್ಮ ಯಜಮಾನರು ನಮ್ಮನ್ನು ಹೀಗೆ ಗೋಳಾಡಿಸುವದಕ್ಕಿಂತ, ಒಮ್ಮೆಲೆ ಪ್ರಾಣ ತಕ್ಕೊಂಡರೆ ಹಿತವಾಗುವುದಿಲ್ಲವೇ? ಹಾ! ಮರೆತೆ ಪ್ರತಿಪದೆಯು ಹೇಳುವ ಸಮಾಚಾರವನ್ನು ಕೇಳುವದಕ್ಕೆ ಹೋಗ ಬೇಕಲ್ಲವೇ?

---

## ೨ ನೆಯ ಪ್ರವೇಶ

(ಬೀದಿ, ವಿಜಯರಾಯನು ಬರುವನು)

**ವಿಜಯ**—ಒಟ್ಟಿನ ಮೇಲಿಂದ ಅವನು ತನ್ನ ಹೆಸರನ್ನು ಆನಂದಶೇಟನೆಂದು ನನಗೆ ಹೇಳಿದನು, ನಿಜವನ್ನೇ ಹೇಳಿವನು ! ಇನ್ನೇನು? ಅವನ ಮುಖ ಚರ್ಯದ ಗುರುತು ಗೊತ್ತಾಯಿತು, ಇರುವ ಸ್ಥಳ ತಿಳಿಯಿತು, ಹೆಸರಂತೂ ಮೊದಲೇ ಗೊತ್ತಾಗಿ ಹೋಗಿದೆ ! ಇನ್ನೂ ಹೆಚ್ಚಿಗೆ ಏನು ಬೇಕು ? ಮನೆಗೆ ಹೋಗುವದು, ಅರ್ಧ ಚಂದ್ರ ಪ್ರಯೋಗ ಮಾಡಿ ಅವಳನ್ನು ಮನೆಬಿಟ್ಟು ಹೊರಗೆ ಹಾಕುವದು ! (ಅಚೆಗೆ ನೋಡಿ) ಇವ ನಾರು? ಅದೋ ಅವನೇ. ಆನಂದ ಶೇಟನು. ನಮ್ಮ ಮನೆಯೊಳಗಿ ನಿಂದಲೇ ಹೊರಬಿದ್ದನು. ಮತ್ತು ಅವನ ಜೊತೆಯಲ್ಲಿ ವೃಶ್ಚಿಕನೂ ಇದ್ದಾನೆ. (ಗುಟ್ಟಾಗಿ) ಅದೋ ವೃಶ್ಚಿಕನು ಅವನಿಂದ ಏನೋ ಲಂಚ ತಕ್ಕೊಳ್ಳುತ್ತಿರುವನು. (ಪ್ರಕಾಶ) ವೃಶ್ಚಿಕಾ, ಅವರ ಕಡೆಯಿಂದ ಏನು ತೆಗೆದುಕೊಂಡೆ ?

**ವೃಶ್ಚಿಕ**—ಏನೂಇಲ್ಲ ಧಣಿಯರೇ-ಅವರು ನನಗೆ ಒಂದು ರೂಪಾಯಿ ಕೊಡಲು ಬಂದರು. ನಾನು ಬೇಡವೆಂದು ಹೇಳಿದೆ ! ಕೊಟ್ಟರು. ತಿರುಗಿ ನೋಡ ತಕ್ಕವನಿದ್ದೆ, ಅಷ್ಟರಲ್ಲಿ ನೀವು ಕರೆದಿರಿ ಬಂದೆ.

(ರೂಪಾಯಿ ಚೆಲ್ಲುವನು. ಹೋಗುವನು.)

**ವಿಜಯ**—(ಆನಂದ ಶೇಟನಿಗೆ) (ಸ್ವಗತ) ಎಲೋ ಕಳ್ಳಾ, ಏನು ಸ್ವಾಮೀ ತಾವು ? ನಮ್ಮ ಮನೆಯಲ್ಲಿ ತಮ್ಮದೇನು ಕೆಲಸ ?

**ಆನಂದ**—ಕೆಲಸ-ತಮ್ಮಕಡೆಗೇ ಇತ್ತು !

**ವಿಜಯ**—ಯಾವ ಕೆಲಸ ?

**ಆನಂದ**—ನನ್ನದೊಂದು ಭಾವಚಿತ್ರ ತಮ್ಮ ಹತ್ತಿರ ಇರುವದಲ್ಲವೇ ?

**ವಿಜಯ**—ಹೌದು ಇರುವದು! ಆದರೆ ಈ ವರ್ತಮಾನವನ್ನು ನಿಮಗೆ ಅವಳೇ ಹೇಳಿರಬಹುದಲ್ಲವೇ !

**ಆನಂದ**—ಹೌದು ಹೌದು ಅವಳೇ ಹೇಳಿದಳು !

**ವಿಜಯ**—ಮತ್ತೇನು ಹೇಳಿದಳು ಅವಳು ತಮಗೆ !

**ಆನಂದ**—ಹೀಗೆಯೇ ಇನ್ನೂ ಕೆಲವು ಸಂಗತಿಗಳನ್ನು ಹೇಳಿದಳು.

**ವಿಜಯ**—ಇಲ್ಲ ಇಲ್ಲ. ಅದರ ವಿಷಯುವಾಗಿ ಸಂಶಯವೇ ನನಗಿಲ್ಲ! ಮುಂದಿನ ವಿಚಾರ ಏನು ಮಾಡಿರುವಿರಿ? ಏನೇನು ನಿಶ್ಚಯ ಮಾಡಿದ್ದೀರಿ?

**ಆನಂದ**—ನಿಶ್ಚಯವೇನು ಮಾಡುವದು? ಆ ಯಃಕಶ್ಚಿತ ಭಾವಚಿತ್ರಕ್ಕಾಗಿ ನಿಮ್ಮ ಕೂಡ ಜಗಳವಾಡುವದು ನನಗೆ ಬೇಕಿಲ್ಲ! ಅವಳೇ ನಿಮಗೆ ಆ ಭಾವಚಿತ್ರವನ್ನು ಸಂತೋಷದಿಂದ ಕೊಟ್ಟ ಮೇಲೆ —

**ವಿಜಯ**—ಇಲ್ಲ ಇಲ್ಲ. ನೀವು ಇಲ್ಲಿಯೇ ತಪ್ಪುವದು, ಅವಳು **ಕೊಡಲಿಲ್ಲ**; ನಾನೇ ತಕ್ಕೊಂಡೆನು.

**ಆನಂದ**—ಅವಳೇ ಕೊಟ್ಟಿರಲಿ! ನೀವಾಗಿಯೇ **ತಕ್ಕೊಂಡಿರಲಿ**; ಸದ್ಯಕ್ಕೆ ಆ ಭಾವಚಿತ್ರವು ನಿಮ್ಮ ಹತ್ತಿರ ಇದ್ದದ್ದು ಖಂಡಿತವಷ್ಟೇ?

**ವಿಜಯ**—ಹೌದು ಇರುವದು.

**ಆನಂದ**—ಸರಿ ಹಾಗಾದರೇ! ಇನ್ನು ಮುಂದೆ ನೀವು ಆ ಭಾವಚಿತ್ರವನ್ನು ತಕ್ಕೊಂಡು ಬೇಕಾದ್ದು ಮಾಡಿರಿ. ಆದರೆ ನಾನು ಇಷ್ಟು ಮಾತ್ರ ಹೇಳುತ್ತೇನೆ–ನಿಮಗೆ, ನೀವು ನನ್ನ ಸರ್ವಸ್ವ ಘಾತಮಾಡಿದಿರಿ!

**ವಿಜಯ**—ಅದು ಹೇಗೆ? ನಿಮ್ಮ ಸುಖದಲ್ಲಿ ನಾನು **ಅಡ್ಡ**ವಾದೆನೆಂದು, ನಿಮಗೆ ವ್ಯಸನವಾಯಿತೊ?

**ಆನಂದ**—ಹೌದು ಹೌದು ಅದರಲ್ಲಿ ಸಂಶಯವೇನು?

**ವಿಜಯ**—ಹಾಗಾದರೆ, ನಾನು ನಿಮಗೆ, ಒಬ್ಬ ದುಷ್ಟ-ಘಾತಕೀ ಮನುಷ್ಯ ನಂತೆಯೇ ಕಾಣುತ್ತೇನಲ್ಲವೇ? ಅಯ್ಯೋ ಈ ಬಡ ಪ್ರಾಣಿಯ ಸುಖ ದಲ್ಲಿ, ನಾನೇ ಮಣ್ಣು ಹಾಕಿದೆನಲ್ಲಾ! ಎಂಥಾ ರಾಕ್ಷಸನು ನಾನು!!

**ಆನಂದ**—ಅದು ಏನೋ ಯಾರಿಗೆ ಗೊತ್ತು? ಅವಳಿಗೂ ನನಗೂ ಮೊನೆ ಮೊನ್ನೆ-ಪ್ರೇಮ ಬೆಳೆದಿತ್ತು, ನೀವು ಅದನ್ನು ಹಾಳುಮಾಡಿದಿರಿ!

**ವಿಜಯ**—ಅವಳಿಗೂ ನನಗೂ ಪ್ರೇಮ ಬೆಳೆದಿತ್ತೆಂದು ಏನೂ ಭಯವಿಲ್ಲದೆ ಹೇಳುವೆ. **ಇದೇನೋ** ಏ ಏ ಬುದ್ಧಿವಂತಾ, **ಅವಳಿಗೂ** ನಿನಗೂ ಪ್ರೀತಿಯು ಬೆಳೆಯುವಾಗ ನನ್ನ ಪ್ರಾಣವು, ಎಷ್ಟು **ತೊಳಲಾಡುತ್ತಿ**

ತ್ತೆಂದು ನೀನು ಬಲ್ಲಿಯಾ ? ಇನ್ನಾದರೂ ನನ್ನ ವಿಷಯವಾಗಿ ಸ್ವಲ್ಪ ಕನಿಕರಪಡುವುದಿಲ್ಲವೇ ನೀನು !

**ಆನಂದ**—ಅದಪ್ಪಾಯಿತು. ಇನ್ನು ಮುಂದೆ ಪ್ರಮಾಣ ಮಾಡಿ ಹೇಳುವ ದೇನೆಂದರೆ, ಇಂದಿಗೆ ಅವಳದೂ ನನ್ನದೂ ಸಂಬಂಧವೇ ಕಡಿಯಿತು. ಇನ್ನು ಮುಂದೆ ಅವಳಿಗೆ ನೀವು, ನಿಮಗೆ ಅವಳು, ಬೇಕಾದಂತೆ ವಿಲಾಸ ಮಾಡಿರಿ.

**ವಿಜಯ**—ಅಹಹಾ ! ಏನು ಔದಾರ್ಯ ತೋರಿಸಿದನಪ್ಪಾ! (ಚುಚ್ಚಿ) ಆದರೆ ಶೇಟಜೀಯವರೇ ಇನ್ನುಮುಂದೆ ನನಗಾದರೂ ಅದರ ಉಪಯೋಗ ವೇನೂ ಇಲ್ಲಾ ! ನೀವು ನಮಗೆ ಹೇಳಿದಂತೆ, ನಾನಾದರೂ ನಿಮಗೆ ಹೇಳುವುದೇನೆಂದರೆ, ಅವಳಿಗೂ ನನಗೂ ಏನೂ ಸಂಬಂಧವಿಲ್ಲ ! ಅವಳಿಗೆ ನೀವು, ನಿಮಗೆ ಅವಳು, ನೀವೇ ಬೇಕಾದಂತೆ ವಿಲಾಸ ಮಾಡಿರಿ !

**ಆನಂದ**—ಛಿ-ಛಿ ಇನ್ನು ಬೇಡಾ ! ಅವಳ ಕೂಡ ವ್ಯವಹಾರವೇ ಬೇಡ. ಈಗಾದದ್ದೇ ಸಾಕು !

**ವಿಜಯ**—ಯಾಕೆ ? ಇಷ್ಟರಲ್ಲಿಯೇ ಅವಳು ನಿಮಗೆ ಬೇಸರವಾದಳೆ ?

**ಆನಂದ**—ಪೂರ್ವದಲ್ಲಿ ಅವಳು ನನಗೆ ಎಷ್ಟು ಪ್ರೀತಿಯವಳಾಗಿದ್ದಳೋ; ಅಷ್ಟು ಈಗ ವೈರಿಯಾದಳು. (ದ್ವೇಷದಿಂದ) ವಿಶ್ವಾಸಘಾತಕೀ—

**ವಿಜಯ**—ವಿಶ್ವಾಸಘಾತಕಿಯೇ—(ಸ್ವಗತ) ಹೌದು ನಿಶ್ಚಯವಾಗಿ ವಿಶ್ವಾಸ ಘಾತಕಿಯು. ನೋಡಿದಿರಾ ಎಂತಹ ನ್ಯಾಯವಿದು ! ಗಂಡನಕಿಂತ ಈ ಭಂಡನ ಅಧಿಕಾರವೇ ಮಿಗಿಲಾಯಿತು ! (ಪ್ರಕಾಶ) ನಿಮ್ಮ ಕೂಡ ಜಗಳಾಡುವದರಲ್ಲಿ ಏನು ಅರ್ಥವಿದೆ ? ಅವಳ ವಿಷಯವಾಗಿ ಮಾಡು ವದನ್ನು ಮಾಡುತ್ತೇನೆ. ನಿಮಗೆ ಬೇಕಾದ್ದು ನೀವು ಮಾಡಿರಿ !

**ಆನಂದ**—ನಾನು ಮಾಡುದೇನು ? ಈ ಯಾವತ್ತೂ ಸುಳ್ಳನ್ನು ಅವಳ ಉಡೆಯಲ್ಲೇ ಹಾಕುತ್ತೇನೆ. ನನಗೇಕೆ ಆವಳ ಭಯ ? ಪ್ರಾಣ ಹೋದರೂ ಚಿಂತೆಯಿಲ್ಲ. ಇನ್ನು ಮುಂದೆ ಕನಸಿನಲ್ಲಿ ಕೂಡ ಅವಳ ಹೆಸರು ತೆಗೆಯುವದಿಲ್ಲ.

(ಇಬ್ಬರು ಬೇರೆ ಬೇರೆ ದಾರಿಯಿಂದ ಹೋಗುವರು.)

## ೩ ನೇ ಪ್ರವೇಶ

(ಬೀದಿ-ಶತತಾರೆಯು ಭಾವಚಿತ್ರ ಹುಡುಕುತ್ತ ಬರುವಳು)

**ಶತತಾರೆ**—ಇದು ಭೂತಚೇಷ್ಟೆಯೋ ? ಏನು ತಿಳಿಯಬೇಕು ! ಅವರು ನನಗೆ ಆ ಭಾವಚಿತ್ರವನ್ನು ಈ ವೃಕ್ಷದ ಬುಡದಲ್ಲಿಯೇ ಕೊಟ್ಟಂತೆ ನೆನಪಾಗುತ್ತದೆ-, ಹೌದು ಇದೇ ಆ ಮಾವಿನ ಮರವು-, ಅದನ್ನು ತೆಗೆದುಕೊಂಡು ಶರಗಿನಲ್ಲಿ ಮುಚ್ಚಿಟ್ಟುಕೊಂಡೆನು, ಮತ್ತು ಹಾಗೇ ಕಾರ್ತಿಕನಾಥನ ದರ್ಶನಕ್ಕೆ ಹೋದೆನು. ಅಲ್ಲಿ ಪ್ರದಕ್ಷಿಣೆ ಹಾಕಿ ಸ್ವಲ್ಪ ಹೊತ್ತು ತುಲಸೀಕಟ್ಟೆಗೆ ಆತುಕೊಂಡು ನಿಂತಿದ್ದೆನು. ಅದು ಅಲ್ಲಿ ಬೇರೆ ಬಿದ್ದಿರಲಿಕ್ಕಿಲ್ಲವಷ್ಟೇ ( ಯೋಚನೆ ) ಇಲ್ಲ. ಅಲ್ಲಿಂದ ಹೊರಟು ದೇವಾಲಯದ ಹೊರಗೆ ಬರುವಾಗ ಅದು ಶೆರಗಿನಿಂದ ಸ್ವಲ್ಪ ಹೊರಗೆ ಕಾಣುತ್ತಿತ್ತು, ಅದನ್ನು ಮುಚ್ಚಿಕೊಂಡದ್ದು ನನಗೆ ಚನ್ನಾಗಿ ಸ್ಮರಣಕ್ಕೆ ಬರುತ್ತಿತ್ತು. ಆ ಮೇಲೆ ಹಾ ಹಾ ನಾನು ಇದೇ ಸ್ಥಳದಲ್ಲಿ ಕಣ್ಣಿಗೆ ಕತ್ತಲೆಕವಿದು ನೆಲಕ್ಕೆ ಬಿದ್ದೆನು. ಬರಹುತವಾಗಿ ಆಗಲೇ ಅದು ಕೆಳಗೆ ಬಿದ್ದಿರಬೇಕು! ಪುನಃ ಜಾಗ್ರತಳಾಗಿ ಮನೆಗೆ ಹೋಗುವಾಗ ಮನಸ್ಸು ಚಲವಿಚಲವಾಗಿತ್ತು. ಆದಕಾರಣ, ಅದರ ಕಡೆಗೆ ನನ್ನ ಮನಸ್ಸು ಹೋಗಲಿಲ್ಲ. ನನ್ನನ್ನು ಯಾವ ಮನುಷ್ಯರು ಮನೆಗೆ ತಲುಪಿಸಿದರೋ, ಅವರ ಕೈಗೆ ಬೇರೆ ಬಿದ್ದಿರಲಿಕ್ಕಿಲ್ಲವಷ್ಟೇ ! ಹಾಗಿದ್ದರೆ ಅದರು ಅದನ್ನು ತಂದು ಕೊಡುತ್ತಿದ್ದರು. ಹಾಗಾದರೆ ಭಾವಚಿತ್ರವು ಎಲ್ಲಿ ಹೋಯಿತು ? ಆನಂದಶೇಟರು ಅದನ್ನು ಒಬ್ಬ ಗೃಹಸ್ಥರ ಕೈಯಲ್ಲಿ ನೋಡಿದೆನೆಂದು ಅಂದರು ! ಅವರು ಯಾರಿದ್ದಾರು ? ಅವರಿಗೆ ನನ್ನ ಬಗ್ಗೆ ಸಂಶಯ ಬಂದಿರುವದು ಯೋಗ್ಯವೇ ಆಗಲಿ, ಆದರೆ ನನಗೆ ದಾರಿ ಯಾವುದು ? ಏನು ಮಾಡಲಿ ? ಅವರು ನನ್ನ ಮೇಲೆ ಕೋಪಿಸಿದ್ದರಿಂದ, ಮನಸ್ಸು ವ್ಯಾಕುಲವಾಗಿದೆ. !

ರಾಗ ಖಮಾಚ ತಾಳ ಧುಮಾ

**ಪತಿಮನಸಂಶಯವೇಕೆ। ಅರಿಯೆನಾ ॥ ನೂತನಕಾರಣವೇನೇ ॥ಪಲ್ಲ॥ ಪರ ಪುರುಷರನಾ। ಸ್ವಪ್ನದಿಕಾಣೇ ॥ ಬರಿದೆ ದೋಷಕೆ ಗುರಿಯಾದೇ ॥ ೧ ॥ ಕೋಪಿಸಿ ಪೋದ ರೀತಿಯು ನೋಡಿ ತಾಪದಿವ್ಯಾಕುಲಳಾದೇ ॥ ೨ ॥**

ಅಮ್ಮಯ್ಯಾ—! ಆನಂದಶೇಟರೆ ಇತ್ತಕಡೆ ಬರುತ್ತಿರುವರು ! ಆದರೆ ಇದು ಕೋಪದ ಮುಖ ಚರ್ಯೆವ್ರೋ – ಅಥವಾ ಸಂಶಯದ್ದೋ, ಇಲ್ಲವೇ ಪ್ರೇಮದ್ದೋ? ಈ ಚಿನ್ಹವನ್ನು ನೋಡಿದರೆ, ಮನಸ್ಸಿನಲ್ಲಿ ತರಂಗಗಳ ತಾಕಲಾಟ ನಡೆದಿರುವುದೇ ಖಂಡಿತ ! (ಆನಂದ ಶೇಟರು ಬರುವರು) ಪಾಪ ನೋಟದ ಹಂಬಲವೂ ನನ್ನ ಕಡೆಗೇ ಇದೆ. (ಪ್ರ) ಅದನ್ನು ಬಲಾತ್ಕಾರದಿಂದ ಬೇರೆಯು ಕಡೆಗೆ ತಿರುಗಿಸುವುದರಲ್ಲಿ, ಯಾವ ಅರ್ಥವಿದೆಯೋ ?

**ಆನಂದ**—( ಸಿಡಿಮಿಡಿಗೊಳ್ಳುತ್ತ ) ನೋಟವು ಹಂಬಲಿಸುವುದಾದರೆ, ಅದನ್ನು ತಡೆದು ಹಾಕೇನು ? ಹಂಬಲಿಸುವದಂತೆ-ಹಂಬಲಿಸುವುದು ! ಹುಡುಗಾಟವಲ್ಲ !

**ಶತತಾರಾ**—ನನಗೆ ಕೇಳಿಸುವಂತೆ, ಹೀಗೆ ಬೇಕೆಂತಲೆ ಮನಸ್ಸಿನಲ್ಲಿ ಮಾತಾಡುವುದಕ್ಕಿಂತಲೂ, ಸ್ಪಷ್ಟವಾಗಿ ಮಾತಾಡುವುದೇನೂ ಕೆಟ್ಟದ್ದಲ್ಲಾ— ಇದನ್ನು ನಾನು – ಅದೋ ಅಲ್ಲಿ – ಗಿಡದ ಮೇಲೆ ಕುಳಿತ ಗಿಳಿಯನ್ನು ಕುರಿತು ಹೇಳುತ್ತೇನೆ ; ಆದರೆ ಅದು, ಇಲ್ಲಿದ್ದವರಿಗೆ ಸಂಬಂಧವಿಲ್ಲ !

**ಆನಂದ**—ಆಯಿತು ಮೋಹಜಾಲಕ್ಕೆ ಪ್ರಾರಂಭ ! ಆದರೆ ನಾನು ಸಾಮಾನ್ಯ ಗಿಳಿಯಲ್ಲ – ಈ ಗಿಳಿಯು ಇಂಥ ಎಷ್ಟೋ ಜಾಲಗಳಿಂದ ಕಿತ್ತಿಕೊಂಡು ಹಾರಿ ಹೋದೀತು !

**ಶತತಾರಾ**—(ಚುಚ್ಚಿ) ಹಾಗಿದ್ದರೆ, ಈಗ ಹೀಗೇಕೆ ವದ್ದಾಡುತ್ತಿರುವುದು ?

**ಆನಂದ**—ಯಾಕೆ ? – ಯಾರದೇ ಭಯ ? ಬೇಕಾದವರು ಬೇಕಾದ ಸ್ಥಳದಲ್ಲಿ, – ಬೇಕಾದಷ್ಟುವೇಳೆ, – ತನ್ನ ಮನಸ್ಸಿಗೆ ಬಂದರೆ ನಿಲ್ಲಬಹುದು - ಸಾಕಾದರೆ ಹೋಗಬಹುದು ! ಅವನಷ್ಟಕ್ಕೆ ಅವನು ಸ್ವತಂತ್ರನು !

**ಶತತಾರಾ**—(ಸಮೀಪಕ್ಕೆ ಹೋಗಿ) ಮೊನ್ನೆ ಆ ಗೋಸಾವಿಯು ಬಹಳ ಸ್ಪಷ್ಟ ಅರ್ಥವಿದ್ದ ಒಂದು ಪದವನ್ನು ಹಾಡಿದನು, ಅದನ್ನು ನನ್ನಷ್ಟಕ್ಕೆ ನಾನು ದೊಡ್ಡ ಧ್ವನಿಯಿಂದ ಹಾಡಿಕೊಳ್ಳುತ್ತೇನೆ. ಅದನ್ನು ಯಾರೂ ಕೇಳಕೂಡದು - ಯಾವುದದು ? - ಹಾ

ರಾಗ ತಿಲಕ ಕಾಮೋದ ತಾಳ ದಾದರಾ

ಶಾಂತಿ ಇದೇ ಸೌಭಾಗ್ಯಸುಖಕರ। ಸಂಸಾರಕೆ ಸ್ವಾಂತದಿ ನೆನೆಸೋ ಈಸವಿ ಬೋಧ ||
ಇಂತು ಸುಮತಿಯು ಪೇಳ್ವೆ ||ಎ|| ಕಡುಸಂತಾಪಾ। ಸಂಶಯಜ್ವಾಲಾ || ಸುಡುವದು
ಮನವ ಸಂತತ || ಅನಂತರೂಪಾ। ಲೋಕದವಾರ್ತಾ। ನೀನಂದಿರೂ ಮನುಜಾ||

ಯಾಕೇ - ತಿಳಿಯಿತೇನು ? ಇದರ ಅರ್ಥವು !

**ಆನಂದ**—ಓಹೋ - ತಿಳಿಯಿತು. ಇದರ ಅರ್ಥವೂ ತಿಳಿಯಿತು, ಮತ್ತು ನಿನ್ನ ಅಭಿಪ್ರಾಯವೂ ಹೊಳೆಯಿತು.

**ಶತತಾರಾ**—ಬರಿಯ ನನ್ನ ಅಭಿಪ್ರಾಯವನ್ನು ತಿಳಿಸುವುದಕ್ಕೋಸ್ಕರ, ಇಷ್ಟು ಎದೆವಡಕೊಳ್ಳಬೇಕಾಯಿತು. ಈಗಾದರೂ ಚನ್ನಾಗಿ ತಿಳಿಯಿತೇ ?

**ಆನಂದ**—ತಿಳಿಯಿತು. ನೆಟ್ಟಗೆ ತಿಳಿಯಿತು – ನಿನ್ನ ಚುಚ್ಚುಮಾತಿನ ಅರ್ಥ ! ಆದರೆ ಒಂದು ಮಾತು, ನೀನು ಚೊಕ್ಕ ಚಿನ್ನದ ಬೊಂಬೆಯಲ್ಲ, - ಚಿನ್ನದ ಮೊಲಾಮು ಮಾಡಿದ ಗೊಂಬೆ ನೀನು !

**ಶತತಾರಾ**—(ಸ್ವಗತ) ನನ್ನ ವಿಷಯವಾಗಿ ಇವರಲ್ಲಿ ಸೇರಿದ ಸಂಶಯವು, ಇನ್ನು ಕಡಿಮೆಯಾಗಿಲ್ಲ - ! ಏನುಮಾಡಲೀ - ! (ಪ್ರಕಾಶ) ಈ ವಿನೋದವು - ಇನ್ನೂ, ತಮಗೆ ಸಾಕಾಗಲಿಲ್ಲವೇ - ? ಈ ತರಹದ ವಿನೋದವು ನನಗೆ ಸೇರುವುದಿಲ್ಲ - ! ಅಲ್ಲಾs - ನಾ ಹೇಳುವ ದೇನಂದರೆ ಒಂದು ಸಲ ಮುಗುಳುನಗೆ ನಕ್ಕು ಮನೆಗೆ ಬರಬೇಕು ನಾನು ಕೊಡುವ ಒಂದು ಸವಿಯಾದ ಎಲೆ ಪಟ್ಟಿಯನ್ನು - ಸೇವಿಸಿದ - ಮೇಲೆ, ನನ್ನಮೇಲೆ ಬೇಕಾದಷ್ಟು ಕೋಪಿಸಬಹುದು. ಯಾಕೆ ಆಯಿತೆ ಮನಸ್ಸಿನಂತೆ - ? ಆಯಿತು - ಅದೋ - ಅದೊ - ನೋಡಿರಿ, ನೀವು ನಗದಿದ್ದರೂ ನಿಮ್ಮ ಕಪೋಲಗಳು ನಗುತ್ತಿವೆ !

**ಆನಂದ**—ಇದೋ ಇನ್ನು - ಇನ್ನು ಮುಂದೆ - ನಿನ್ನ ಮನೆ - ಆ ಎಲೆ ಪಟ್ಟಿ, ಆದನ್ನು ಮರೆತುಬಿಡು.

**ಶತತಾರಾ**—( ದಿಟ್ಟತನದಿಂದ ) ನೋಡಿರಿ ! ಏನು ಮಾತಾಡುವದು ವಿಚಾರ ಮಾಡಿ ಮಾತಾಡಿರಿ! ಈ ಸಮಯ ಪುನಹ ದೊರೆಯಲಾರದು, ಆಮೇಲೆ ನೀವು ಎಷ್ಟೇ ಬೇಡಿಕೊಂಡರೂ, ನಾನು ಕೇಳಲಿಕ್ಕಿಲ್ಲ—! ಇಷ್ಟೇ ಅಲ್ಲ-

ಆಮೇಲೆ ಎಷ್ಟು ಪ್ರಮಾಣ ಮಾಡಿದರೂ — ವಚನಕೊಟ್ಟರೂ— ತಪ್ಪಾಯಿತೆಂದು ಕಾಲಿಗೆ ಬಿದ್ದು ಕ್ಷಮೆಬೇಡಿದರೂ,—ನಾನು ಅತ್ತ ಕಡೆಗೆ ಮನಸ್ಸು ಮಾಡಲಿಕ್ಕಿಲ್ಲ. ಅದಕ್ಕೋಸ್ಕರ ಪೂರ್ಣ ವಿಚಾರ ಮಾಡಿರಿ! ಮತ್ತು ನಡೆಯಿರಿ ನನ್ನ ಮನೆಗೆ—!

**ಆನಂದ**—ಕಾಲುಬಿದ್ದು ಕ್ಷಮೆಬೇಡುವ ದಿನಗಳು ಎಂದೋ ಹೋದವು! ಇನ್ನು ಮೇಲೆ ಅಂತಹದನ್ನು ಸ್ವಪ್ನದಲ್ಲಿಯೂ ತರಬೇಡ! ನಾನು— ಇದು ಅಲ್ಲಾ.

**ಶತತಾರಾ**—ಇದು—ನಿಜವೇ—! ನನಗೆ ಹಾಗೆ ಕಾಣುವುದಿಲ್ಲ! (ನಗುವಳು)

**ಆನಂದ**—ನಗು-ನಗು-ಬೇಕಾದಷ್ಟು ನಗು. ಇಷ್ಟು ದಿವಸ ನನ್ನನ್ನು ಬೆಪ್ಪನೆಂದು ತಿಳಿದು, ನಿನ್ನ ಮೋಹಜಾಲದಲ್ಲಿ ತೊಡಗಿಸಬೇಕೆಂದು ವಿಚಾರ ಮಾಡಿದ್ದೇ—ಆದರೆ

ರಾಗ ಕೇದಾರ ತಾಳ ತ್ರಿವಟ

ತವದುರುಳಭಾವಾ || ವಿಫಲವಿದಾಯ್ತು ||ಪಲ್ಲ|| ಸತ್ಯವಾಗಿಭಾರೀ | ಮೃತ್ಯುಘೋರ ಬಾಧೆ.|| ತಪ್ಪಿತೆಸಹಜಾ ||

**ಶತತಾರಾ**—ಹೌದು—ಹೌದು—ನಿಶ್ಚಯ- ನೀವು ದೈವಶಾಲಿಗಳೆಂದೇ, ನನ್ನ ಬಲೆಯಲ್ಲಿ ಸಿಕ್ಕದೇ ಪಾರಾದಿರಿ—! ಇನ್ನು ಮೇಲೇನು? ಬೇಕಾದಲ್ಲಿ ಹೋಗಬಹುದು! ಆತಂಕವೇ ಇಲ್ಲ.

**ಆನಂದ**—ನಾನೂ ಬೇಕಾದ ಕಡೆಗೆ ಹೋಗುತ್ತೇನೆ, ಮತ್ತು ನೀನು ಬೇಕಾದ ಕಡೆಗೆ ಹೋಗು, ಮತ್ತು ಬೇಕಾದವರನ್ನು—

**ಶತತಾರಾ**—ಹಾ—! ಮಹಾರಾಜ ಮರ್ಯಾದೆಯನ್ನು ಮೀರಿದಿರಿ!

**ಆನಂದ**—ಏನೂ ಚಿಂತೆಯಿಲ್ಲ — ಇದು ಮರ್ಯಾದೆಯನ್ನು ನೋಡುವ ಸಮಯವಲ್ಲ—! ನಿನ್ನಂಥ ಸ್ವೈರಣಿಗೆಕೆ ಮರ್ಯಾದೆಯ ಭಯ!

**ಶತತಾರಾ**—ನಾನು ಸ್ವೈರಣಿಯೇ—?

**ಆನಂದ**—ಹೌದು! ನೀನು ಸ್ವೈರಣಿಯು. ನಿನ್ನ ಸರ್ವಕಾರಸ್ಥಾನವು ನನಗೆ ತಿಳಿದಿರುವುದು-ಆದರೆ ಸ್ಪಷ್ಟವಾಗಿ ಏನು ಹೇಳಲಿ? ಶತತಾರೆಯೇ

ನಿನ್ನನ್ನು ಪ್ರಾಣಕ್ಕಿಂತಲೂ ಅಧಿಕವಾಗಿ ತಿಳಿದಿದ್ದೆನು; ಆದರೆ ಈಗ ನಿನ್ನ ವಿಷಯವು ನನಗೆ ಬೇಸರವಾಗಿದೆ. ಹೇಳುವುದಕ್ಕೆ ವ್ಯಸನ ವಾಗುತ್ತದೆ. ಆದರೂ ಹೇಳುತ್ತೇನೆ, ಇದೋ ಇನ್ನು ಮುಂದೆ ನಿನಗೆ, ಇದೇ ನನ್ನ ಕೊನೆಯ ಭೇಟಿಯು !

**ಶತತಾರಾ**—ಅದೇಕೆ - ಮತ್ತು, ನಾನು ಇಷ್ಟು ತಿರಸ್ಕೃತಳಾದುದಕ್ಕೆ ಕಾರಣ ವೇನು ?

**ಆನಂದ**—ಕಾರಣವೇ? ನೀನು ! ನಾನು ನಿನಗೆ ಕೊಟ್ಟ ಭಾವಚಿತ್ರವನ್ನು ಒಬ್ಬ ಪೋಕರೀ ಮನುಷ್ಯನಿಗೆ ಕೊಟ್ಟಿರುವೆ !

**ಶತತಾರಾ**—(ಆತ್ಮಗತ) ಇವರು ಈ ಅಪವಾದವನ್ನು ನನ್ನ ಮೇಲೆ ಸುಳ್ಳೇ ಹೊರೆಸಿರುವರು. ಅಂದಮೇಲೆ, ಇದೇ ರೀತಿಯಾಗಿ ಇವರ ಖೋಡಿತನವನ್ನು ಮುರಿಯಬೇಕು. ಅದರ ವಿನಹ ಬೇರೆ ಮಾರ್ಗವೇ ಇಲ್ಲ—!

**ಆನಂದ**—ಯಾಕೆ ಮಾತನಾಡುವುದಿಲ್ಲ —? ಕೊಟ್ಟಿರುವೆಯೋ ಇಲ್ಲವೋ ?–

**ಶತತಾರಾ**—ಹೌದು ಕೊಟ್ಟೆ—! ಮುಂದೇನು ?

**ಆನಂದ**—ಯಾಕೆ ಕೊಟ್ಟೆ.

**ಶತತಾರಾ**—ಯಾಕೆಂದರೆ—, ನನಗೆ ಬೇಕಾಗಿತ್ತು - ಕೊಟ್ಟೆ.

**ಆನಂದ**—ಕೊಟ್ಟರೆ ಕೊಟ್ಟೆ - ! ಅದರ ವಿಷಯವಾಗಿ ನನಗೆ ವಿಷಾದವಾಗು ವದೂ ಅಷ್ಟರಲ್ಲಿಯೇ ಇದೆ.

**ಶತತಾರಾ**—(ಚುಚ್ಚಿ ಮಾತಾಡುವಳು) ಹಾಗಿದ್ದರೆ, ಹೀಗೇಕೆ ವುಸುರುಗಯ್ಯು ವಿರಿ ?

**ಆನಂದ**—ವುಸುರುಗಯ್ಯುವುದಕ್ಕೆ - ನಾನೇನು ಬಳೆ ಇಟ್ಟಿಲ್ಲ.

**ಶತತಾರಾ**—ಎಲ್ಲಿ - ಎಲ್ಲಿ ನೋಡುವಾ ! ಹೌದು - ಹೌದು - ಕೈಯಲ್ಲಿ ಮಾತ್ರ ಬಳೆ ಕಾಣಿಸುವುದಿಲ್ಲ. ಆದರೇ - ಇದೊ - ಜೋಕೆ ನನ್ನ ಮುಂದೆ ಈ ವೀರ ತನದ ಸಡಗರವು ನಡೆಯುವುದಿಲ್ಲ ! ಇನ್ನು ಮುಂದೆ ನನ್ನ ಮನೆಯ ಬಾಗಿಲದೊಳಗೆ ಕಾಲು ಹಾಕುವದು ಕಠಿಣವಾದೀತು ! ಎಚ್ಚರಿರಲಿ—!

**ಆನಂದ**—ಇದೋ-! ಮತ್ತೂ ನೀನಾದರೂ ಜೋಕೆಯಿಂದಿರು! ಇಲ್ಲವಾದರೆ ಒಮ್ಮೆ ಕೊರಳಿಗೆ ತೆಕ್ಕೆ ಬಿದ್ದಂತೆ, ಮತ್ತೊಮ್ಮೆ—ಓಡಾಡುವ ಬೀದಿಯಲ್ಲಿಯೋ ಆ ಪುರುಷನ ಕೊರಳಿಗೆ ತೆಕ್ಕೆ ಬೀಳಬೇಡ !

**ಶತತಾರಾ**—ಯಾರ ಕೊರಳಿಗೆ? ಎಲ್ಲಿ? ಯಾವಾಗ್ಗೆ? (ಸ್ವಗತ) ಇದನ್ನು ಇವರು ಕಲ್ಪಿಸಿಕೊಂಡು ಮಾತನಾಡುತ್ತಿರುವರು.

**ಆನಂದ**—ಎಲ್ಲಿ ಅಂದರೆ, ಆ ವೃಕ್ಷದ ಬುಡದಲ್ಲಿ-, ನಿನ್ನೆ ಬೆಳಿಗ್ಗೆ-, ಅವರು ನಿನಗೆ ಒಳಗೆ ನಡೆಯಂದು ಅನ್ನುತ್ತಿದ್ದರು-ಯಾಕೆ-ಈಗಾದರೂ ನಿನ್ನ ಮನಸ್ಸಿಗೆ ಯಿತೇ—?

**ಶತತಾರಾ**—(ಸ್ವ) ಇ ತಿಳಿಯಿತು. ನಾನು ದೇವಾಲಯದಿಂದ ತಿರುಗಿ ಬರುವಾಗ್ಗೆ—ಕಣ್ಣಿಗೆ ಕತ್ತಲೆಗವಿದು ನೆಲಕ್ಕೆ ಬೀಳಲಿಲ್ಲವೇ, ಅದೇ ವಿಷಯವಿದ್ದೀತು, ಆದರೆ ಇವರಕೂಡ ಸತ್ಯ ಮಾತಾಡಿ ಪ್ರಯೋಜನವಿಲ್ಲ-ಆಗಿನಂತೆ ಕೆಲವು ವೇಳೆ ವಿರೋಧವಾಗಿಯೇ ನಡೆಯಬೇಕು.

**ಆನಂದ**—ಯಾಕೆ-ಗುರ್ತು ಮನಸ್ಸಿಗೆ ಹೊಳೆಯಿತೇ ?

**ಶತತಾರಾ**—ಹೊಳೆಯಿತು-ಹೊಳೆಯಿತು-! ಮುಂದೇನು ?

**ಆನಂದ**—ಮುಂದೇನು? ಮತ್ತೊಮ್ಮೆ ಹಾಗೆ ತೆಕ್ಕೆ ಬೀಳ ಬೇಡ !

**ಶತತಾರಾ**—ಅದೇಕೆ ನನಗೇನು ಭಯ ? ನನ್ನಷ್ಟಕ್ಕೆ ನಾನು ಸ್ವತಂತ್ರಳು.

**ಆನಂದ**—ಹಾಗಿದ್ದರೆ ಮೊದಲೇ ನೀನು ಇದನ್ನು ಹೇಳಬೇಕಿತ್ತು.

**ಶತತಾರಾ**—ಸರಿ-ಸರಿ-ನಾಯಕಸಾನಿಯರಾದ ನಾವೇ ಹೀಗೆ ಸತ್ಯ ಮಾತಾಡಲು ಪ್ರಾರಂಭ ಮಾಡಿದರೆ-, ನಮ್ಮ ಅವತಾರವೆ ಮುಗಿದೀತು!

**ಆನಂದ**—ಹಾಗಾದರೇ—

ರಾಗ ಕಾಫಿ ತಾಳ ದಾದರಾ

**ಚಂಚಲಮತಿಯೇ ವಾರನಾರೀ॥ ಪ್ರಮಾಣದಿ ಕರವ ಪಿಡಿದು। ವರಿಸಿ ಎನಗೆ। ಮೋಸಗೈದೇ ॥ಪಲ್ಲ॥ ಮಧುರ ಮಧುರ ನುಡಿಯನಾಡೀ॥ ಪುದುಳವೆನಿತು ಪಸರಿಸಿದೇ। ಮುದದಿ ರಮಾಪತಿಯ ಸಾಕ್ಷಿ। ಗೈದುದನೃತವೇನೇ ॥೧॥**

**ಶತತಾರಾ**—ಅಂದರೇ, ನಾನು ಪ್ರಮಾಣ ಮಾಡಿದ್ದನ್ನು, ನೀವು ನಿಜವೇ ಯೆಂದು ತಿಳಿದಿರೋ—

೨೩ ರಾಗ ಜಂಝೂಟಿ ತಾಳ ದಾದರಾ

ಮೂಢಮತಿ ಮುಗುದೆ ಅತಿ। ಧನಿಕ ಗಣಿಕ ಬಾಲೆಯಾ। ಪಿಡಿದು ವಿವಿಧಪಾಶ ವೆಸಗಿ। ಮೋಹಿಸುವುದು ಸಹಜವೇ ॥ಪಲ್ಲ॥ ನಾನು ಗೈದ ಶಪಥ ವಚನ। ನಿಜವು ತಿಳಿಯಬೇಡಿ ॥ ಜನವು ನಿಮ್ಮ ಮರುಳ ತನವ। ನೋಡಿ ಹಾಸ್ಯ ಮಾಳ್ಪುದಾ ॥೧॥

**ಆನಂದ**—ಸಾಕು-ಸಾಕು-ಇದೇ ನಿಶ್ಚಯ! ನನ್ನ-ನಿನ್ನ-ಇದೇ ಕೊನೆಯ ಭೆಟ್ಟಿಯು!

**ಶತತಾರಾ**—ಸುಖವಾಗಿ ಹೋಗಿರಿ. ಮತ್ತೊಮ್ಮೆ ಹೀಗೆ ಮೋಸ ಹೋಗ ಬೇಡಿರಿ.

**ಆನಂದ**—ನಾನು ಪುನಃ ಭೇಟಿಯಾದೇನೆಂದು, ನೀನು ತಿಳಿದಿರಬಹುದು. ಆದರೆ ಅದನ್ನು ಮರೆತುಬಿಡು. (ಹೋಗುವನು)

**ಶತತಾರಾ**—ಮರೆತೇ ಬಿಡುವೆನು - ಆಯಿತೇ - ಆದರೆ, ಮೊದಲು ತಾವು ಹೋಗಿರಿ! (ಸ್ವಗತ) ಅಮ್ಮಯ್ಯಾ ಸವಾರಿಯು ಮತ್ತೆ ತಿರುಗಿತು. ಮತ್ತೇನು ಹೇಳುವದಿದೆಯೋ?

**ಆನಂದ**—(ಪ್ರವೇಶಿಸಿ) ಕೊನೆಗೆ ಒಂದೇ ಒಂದು ಮಾತು, ನಾನು ನಿನಗೆ ಹೇಳತಕ್ಕದ್ದಿದೆ. ನೀನು ನನ್ನ ಮನಸ್ಸನ್ನು ಕದ್ದುಕೊಂಡಿದ್ದೆ, ಮತ್ತು ನಾನಾದರೂ ಅದನ್ನು ಸಂತೋಷದಿಂದ ನಿನ್ನ ಸ್ವಾಧೀನ ಮಾಡಿದ್ದೆನು. ಅನಕ್ಕೋಸ್ಕರ ಈಗ ನಿನ್ನನ್ನು ಬಿಟ್ಟು ಹೋಗುವದೆಂದರೆ ನನ್ನ ಪ್ರಾಣಕ್ಕೇ ಬಂದಿದೆ. ಆದರೂ ಒಮ್ಮೆ ನಿಶ್ಚಯವಾದ ಮೇಲೆ ಪುನಹ ಅವರ ಗೊಡವೆ ಯೇತಕ್ಕೆ? ಆವರೂ ನೀನು ಎಲ್ಲಿಯಾದರೂ ಸುಖವಾಗಿರು. (ಸ್ವಲ್ಪ ಹೋಗಿ ತಿರುಗಿ ಬರುವನು) ನಿನ್ನ ವಿಷಯ ವಾಗಿ ನನ್ನ ಕಿವಿಯವರೆಗೆ ವಿಪರೀತ ಮಾತುಗಳು ಬರುವಂತೆ ಮಾತ್ರ ಮಾಡಬೇಡ. ಯಾಕೆಂದರೆ—

ರಾಗ ಜಯಜಯವಂತಿ ತಾಳ ಝಂಪಾ

ಪ್ರಮಾಣದಿ ನಿನ್ನ ಸತಿ ಎಂದು ಕೇಳಿದೇ ।। ರಮಿಸಿ ಸದಾಕಾಲಯಿರು ಸೌಖ್ಯವಾಗಿ ।।ಪಲ್ಲ।। ಆಳಲದಲಿ ಬಳಲದಲೇ । ಇಳೆಯೊಳು ಬಾಳೇ ।। ಬಲುಯವ್ವನದ ಗರುವ । ದಲಿ ಲೋಲೆಯಾಗಿ ।।೧।। ತೋರೀಕಪಟಭಾವ । ನೆರೆ ವಂಚಿಸಿದೇನೀ ಎನ್ನಾ ।। ಪರಿನಿನ್ನ ವಿರಹದಲಿ । ಮರುಗುವೆ ನಿಜದೆ ।।೨।।

**ಶತತಾರೆ**—ಒಳ್ಳೇದು ಹೋಗಿರಿ, ಇನ್ನುಮೇಲೆ-ನೀವು ನನಗೆ, ನಿಜವಾಗಿಯೂ ಭೇಟಿಯಾಗುವದಿಲ್ಲವೇ—?

**ಆನಂದ**—ಇನ್ನು ಆ ಭೇಟಿಯ ಹೆಸರೇ ತೆಗೆಯಬೇಡ! ನಮ್ಮ ಮುಖದಿಂದ ಶಬ್ದಗಳು ಹೊರಟರೆ ತೀರಿತು-ಧನುಷ್ಯದ ಮೇಲಿನ ಬಾಣವು—!

**ಶತತಾರಾ**—ಆದರೆ ನಾನು ಈ ದಿವ್ಸ ಸಾಯಂಕಾಲ-ಹೊರಗೆ ಹೋಗುವುದಿಲ್ಲ, ಇಲ್ಲವಾದರೆ-ನಾನು ಹೊರಗೆ ಹೋಗೋಣ,-ತಾವು ಬರೋಣ ಹೀಗೆ ತಪ್ಪುಗಂಟಾದೀತು. ಆದ್ದರಿಂದ ವಿಚಾರಿಸಿದೆನು.

**ಆನಂದ**—ಪ್ರಾಣ ಹೋದರೂ ಬರುವದಿಲ್ಲವೆಂದು, ಆಗಲೇ ಹೇಳಲಿಲ್ಲವೇ ನಾನು! ಅಂದಮೇಲೆ ತಪ್ಪುಗಂಟಾಗುವದು ಹೇಗೆ?—

**ಶತತಾರಾ**—(ಮುಗುಳುನಗೆ ಬೀರುತ್ತ) ಅದೆಲ್ಲ ನನಗೆ ಗೊತ್ತು. ಆದರೆ ಈ ದಿವಸ ನಾನೇ - ಸ್ವತಃ - ಮಸಾಲೆ ಹಾಲು ತಯಾರಿಸುವೆನೂ - ತಾವು ಬರದಿದ್ದರೆ ನನಗೆ ಕೋಪ ಬಂದೀತು!

**ಆನಂದ**—ಬರಲಿ-ಬರಲಿ-ಬೇಕಾದಷ್ಟು ಬರಲಿ ಕೋಪ! (ಹೋಗುವನು)

**ಶತತಾರಾ**—(ಸ್ವ) ನಿಜವಾಗಿಯೂ ನನ್ನ ಮೇಲೆ ಇವರದು ನಿಷ್ಕಲಂಕವಾದ ಪ್ರೀತಿಯಿದೆ. ಆದರೆ ಆ ಸುಟ್ಟ ಭಾವಚಿತ್ರವೇ ಇಷ್ಟೆಲ್ಲ ತೊಂದರೆ ಮಾಡಿತು. ಮೊದಲು ಮನೆಗೆ ಹೋಗಿ ಅದನ್ನು ಚನ್ನಾಗಿ ಶೋಧಿಸೋಣ—

ರಾಗ ಖಮಾಜ ತಾಳ ತ್ರಿವಟ

ವಿಮಲನಿಜವಿದೇ ಮಮತೇ ।। ರಮಿಸಿ ಪತಿಮನ ಪರಿಯರಿತೇ ನೀಗಾ ।।ಪಲ್ಲ।। ಮನ ಒರೆಗಾಣಿಸಿ । ಪ್ರಣಯನೆಲೆಯನರಿತೇ ।। ಮನೋಲ್ಲಾಸ ತಳದೇ ।।೧।।

(ಮೂರನೇ ಅಂಕ ಸಮಾಪ್ತ)

---

# ನಾಲ್ಕನೇ ಅಂಕು

## ೧ನೇ ಪ್ರವೇಶ

(ಆನಂದಶೇಟನ ಮನೆ. ಆನಂದಶೇಟನು ಓಡಾಡುತ್ತಿರುವನು)

**ಆನಂದ**--(ಸ್ವ) ಮನಸ್ಸು ಓಡಿಹೋಗುವದಕ್ಕೆ ಯಷ್ಟು ನುಗ್ಗಿದರೂ,-ಯಷ್ಟೋ ಹಾತೊರೆದರೂ, ನಾನು ಧೀರನಾದ್ದರಿಂದಲೇ ಅದನ್ನು ನಿಗ್ರಹ ಮಾಡಿದೆನು. ಇಲ್ಲದಿದ್ದರೆ ಪರಿಣಾಮವು ಕಠಿಣವಿತ್ತು. ಏನೇ ಇರಲಿ, ಶತತಾರೆಯ ತೀಕ್ಷ್ಣ-ನೇತ್ರ ಕಟಾಕ್ಷದ ಹೊಡೆತಕ್ಕೆ ಬಲಿ ಬೀಳದೆ ಒಳ್ಳೇ ಜಿದ್ದಿನಿಂದ ಪಾರಾದೆನು. ಒಳ್ಳೇ ನಾನೀ ಅನ್ನುವಂಥವರು ಕೂಡ ಎಂದೋ ಬಲಿಯಾಗಿ ಹೋಗುತ್ತಿದ್ದರು. ಹೋಗಲಿ ಇನ್ನು ಅದನ್ನು ಸ್ಮರಿಸಿ ಪ್ರಯೋಜನವಿಲ್ಲ. ಆದರೆ ಅವಳು ತನ್ನ ನಿಯತ್ತನ್ನು ಚೆನ್ನಾಗಿ ಕಾದುಕೊಂಡಿದ್ದರೆ-, ನನ್ನನ್ನೇ ಹೊಂದಿಕೊಂಡಿದ್ದರೆ, ನನ್ನ ವಿಲಾಸಕ್ಕೆ ಸೌಖ್ಯಕ್ಕೆ ಪರಿಮಿತಿಯೆ ಇದ್ದಿಲ್ಲ. ಅವಳಂಥ ರೂಪ ಸಂಪನ್ನೆಯು ಸಾವಿರದಲ್ಲಿ-ಒಬ್ಬಳು-ದೊರೆಯುವುದೂ ವಿರಳ. ಇರಲಿ, ಇನ್ನು ಆ ವಿಚಾರವನ್ನು ತೆಗೆದು ಮಾಡುವುದೇನು. ಅವಳ ಸೌಂದರ್ಯದ ನೆನಪೂ ಯಾಕೆ ನನಗೆ ? ಅದೊಂದು ಗಿಲೀಟು. ಆದರೆ, ಅವಳ ಮೈಕಟ್ಟು ಎಂಥದು ? ಎಷ್ಟು ಸೊಬಗಿನದು ?

ದರ್ಬಾರಕಾನಡಾ ತಾಳ ತ್ರಿವಟ

**ಶಶಿವದನಾ ಸುಖವಿಲಾಸಿನೀ । ಭಾಸುರವೇಣೀ ।। ಮೋಹಕಮೃದುಗಜಗಾಮಿನೀ ।।ಪಲ್ಲ।। ರಸಿಕ ಮಧುರ ಸಂಗೀತ ರಮ್ಯ ರಸವಾಸಿನೀ ।। ಅನುಪಲ್ಲ ।। ಪ್ರಣಯೋತ್ಸಾಹಕ ಚಂಚಲನಯನಾ । ವಿನಯ ಶೀಲ ಸಂಪನ್ನ ಸುಖದವನ ಮೋಹಿನೀ ।।೧।।**

ಆದರೆ ಇವೆಲ್ಲವೂ ಮೇಲ್ತೋರಿಕೆಯ ಅಲಂಕಾರಗಳಷ್ಟೇ ಹೋಗಲಿ - ಇನ್ನು ಮೇಲೆ ಅವಳ ಹೆಸರೇ ಬೇಡ! — ಅವಳ ಸದ್ಗುಣಗಳ ಸ್ಮರಣೆಯೂ ಬೇಡ. ಒಮ್ಮೆ ಸಂಬಂಧವು ತಪ್ಪಿ ಹೋದದ್ದೇ ಗುಣ

ವಾಯಿತು. ಆದರೆ ಅವಳ ಹೆಸರು ಮರೆಯಲಿಕ್ಕೆ ಏನು ಹಂಚಿಕೆ ಮಾಡ ಬೇಕು ?—ಶತತಾರೆ ನೀನು ನನಗೆ ಹೀಗೆ ಮೋಸ ಮಾಡಿದೆಯಾ ?

**ಫಲಗುಣ್ಯಾ**—(ಪ್ರವೇಶಿಸಿ) ಧಣಿಯರೇ-ಧಣಿಯರೇ-

**ಆನಂದ**—(ಸ್ವಗತ) ಅವಳು ಜಗತ್ತಿನಲ್ಲಿಯೋ ಇಲ್ಲವೆಂದು ತಿಳಿಯೋಣ! (ಗುಣುಗುಟ್ಟುತ್ತಾ) "ಗಣಿಕೇಯಾ ಸಂಗವು ಬೇಡಪ್ಪಾ-" !

**ಫಲಗುಣ್ಯಾ**—(ಸ್ವ) ಮನಸ್ಸು ಗಾನದಲ್ಲಿ ತಲ್ಲೀನವಾಗಿ ಹೋಗಿದೆ !—

**ಆನಂದ**—ಸಾಕು !—ಇದೇ ನಿಶ್ಚಯ ! ಹೀಗೇ ಮಾಡಬೇಕು, ಅದರ ವಿನಹ ಬೇರೆ ಮಾರ್ಗವೇ ಇಲ್ಲ. (ನೋಡಿ) ಯಾರದು? ಫಲುಗುಣ್ಯಾ-!— ಯಾಕೆ ಬಂದೆ-?

**ಫಲುಗುಣ್ಯಾ**—ಇದೋ-ಇದೊಂದು ಪತ್ರ ಬಂದಿರುವದು.

**ಆನಂದ**—(ಸ್ವಗತ) ಅವಳು ಹೀಗೆ ಮಾಡುವಳೆಂದು, ನಾನು ಕನಸು ಮನಸ್ಸಿನಲ್ಲಿ ಕೂಡ ಎಣಿಸಿರಲಿಲ್ಲ. (ಪ್ರಕಾಶ) ಓಹೋ—ನೀನು ಏನು ಹೇಳಿದೆ ?—

**ಫಲುಗುಣ್ಯಾ**—ಇದೊಂದು ಪತ್ರವು ತಮ್ಮ ಹೆಸರಿನಲ್ಲಿ ಬಂದಿರುವದು.

**ಆನಂದ**—ಅದು ಈ ಸಮಯದಲ್ಲಿ ಬೇಡ. ಆಮೇಲೆ ತಂದುಕೊಡು. (ಸ್ವ) ಅವಳು ತನ್ನ ಕರ್ಮದ ಫಲವನ್ನೇ ಅನುಭೋಗಿಸಿದಳು. ಅದರ ವಿಷಯಕ್ಕೆ ನಾನೇಕಿಷ್ಟು ವ್ಯಥೆಪಡಬೇಕು ?

**ಫಲುಗುಣ್ಯಾ**—ಧಣಿಯರೇ ಈ ಪತ್ರವು ಯಾರ ಕಡೆಯಿಂದ ಬಂದಿರುವದೋ ಅದನ್ನಾದರೂ ನೋಡಿರಿ.

**ಆನಂದ**—ಯಾರ ಕಡೆಯಿಂದ ಬಂದಿರುವದು ?

**ಫಲಗುಣ್ಯಾ**—ಧಣಿಯರೇ ಈ ಪತ್ರವು ಚಾಮರಾಜಪೇಟೆಯಿಂದ ಬಂದಿರುವದು.

**ಆನಂದ**—ಏನು ? ಶತತಾರೆಯ ಕಡೆಯಿಂದ ಬಂದಿರುವದೇ ? ಹೋಗು ! ಮೊದಲು ಅದನ್ನು ತೆಗೆದುಕೊಂಡು ಹೋಗು. ನನಗೆ ಅದರ ಆವಶ್ಯಕತೆ ಇಲ್ಲ. ನಾನು ಅದರ ಕಡೆಗೆ ಕಣ್ಣೆತ್ತಿ ಕೂಡ ನೋಡುವದಿಲ್ಲ.

ನಡೆ ಹೊರಟುಹೋಗು. ಪತ್ರವನ್ನು ಹರಿದು ತುಂಡು-ತುಂಡು-ಮಾಡು! ಸುಟ್ಟುಹಾಕು!

**ಫಲುಗುಣ್ಣಾ**—(ಸ್ವ) ಈ ವಿಷಯವೇನೋ ಬೇರೆ ಕಾಣುವದು. ಆ ನಾಯಕ ಸಾನಿಯ ಹುಡುಗೆಯು, ಈ ರಾಯರಿಗೆ ಚನ್ನಾಗಿ ಕೈತೋರಿಸಿದಂತೆ ಕಾಣುವದು; ಅಂತೆಯೇ ಹೀಗೆ ಚಡಪಡಿಸುತ್ತಿರುವರು. (ಪ್ರಕಾಶ) ಧಣಿಯರೇ ನಿಜವಾಗಿಯೂ ಪತ್ರವನ್ನು ತೆಗೆದುಕೊಂಡು ಹೋಗಲೇ? ಯಾಕೆ?—

**ಆನಂದ**—ಯಾಕೆ ಇಲ್ಲ-ಏನೂ ಇಲ್ಲ! ಮತ್ತೊಮ್ಮೆ ನನಗೆ ಅವಳ ಪತ್ರವನ್ನು ತೋರಿಸಬೇಡ. ಜೋಕೆ! ಇನ್ನು ಮೇಲೆ ಅವಳ ಪತ್ರಕ್ಕೂ ನನಗೂ ಯಾವ ಸಂಬಂಧವೂ ಇಲ್ಲ.

**ಫಲುಗುಣ್ಣಾ**—ಅಂದರೆ ಧಣಿಯರೇ-ಇವಳೇನಾದರೂ ನಿಮಗೆ—

**ಆನಂದ**—ಅಂದರೆ ಇಲ್ಲ-ಏನೂ ಇಲ್ಲ-ಪುನಃ ಅವಳ ಹೆಸರನ್ನು ನನ್ನ ಮುಂದೆ ತೆಗೆಯಬೇಡ!— ಅವಳ ಹೆಸರು ಕೇಳಿದಕೂಡಲೇ — (ಸ್ವಗತ) ಹೋಗಲಿ ನಾನೇಕೆ ಅವಳ ವಿಷಯವಾಗಿ ದುಷ್ಟ ಮಾತಾಡಬೇಕು? ನನಗೆ ಅವಳ ದರ್ಶನ ಬೇಡ-ಮಾತು ಬೇಡ-ಪತ್ರ ಬೇಡ-ಸಮಾಚಾರವೇ ಬೇಡ. ಆಮೇಲೆ ಅವಳೇನು ಮಾಡುವಳು? (ಪ್ರಕಾಶ) ಫಲುಗುಣ್ಣಾ ನೀನು ಈಗಲೇ ಹೋಗಿ ನಮ್ಮ ಕಾರಕೂನನಿಗೆ ನಾವು ಮುಸಾಫರಿಗೆ ಹೊರಡುವ ಸಿದ್ಧತೆಯನ್ನು ಮಾಡುವದಕ್ಕೆ ಹೇಳು, ಮತ್ತು ನನ್ನ ದೊಡ್ಡ ಕುದುರೆಗಾಡಿಯನ್ನು ಹೂಡಿಕೊಂಡು ಬಾ-ಹೋಗು ಬೇಗನೇ-

**ಫಲುಗುಣ್ಣಾ**—ಇಷ್ಟೇಕೆ ಅವಸರ? ತಾವು ಇಂದೇ ಹೊರಡದೇ, ನಾಳೆ ಹೊರಡುವ ಆಲೋಚನೆ ಮಾಡುವದೇ ಗುಣವಾಗಿ ತೋರುವದು. ಅಂದರೆ ಏನಾದರೂ.

**ಆನಂದ**—ಇಲ್ಲಿಲ್ಲಾ-ನಾನು ಈ ಕ್ಷಣವೇ ಹೊರಡತಕ್ಕವನು! ಗಾಡಿಯನ್ನು ಹೂಡಿಕೊಂಡು ಬಾ ಬೇಗನೇ—

**ಫಲುಗುಣ್ಣಾ**—ನೋಡಿರೀ-ಧಣಿಯರೇ ಚನ್ನಾಗಿ ವಿಚಾರ ಮಾಡಿರಿ! ಗಾಡಿಯಲ್ಲಿ ಕುಳಿತು ಹೋಗುವಾಗ ಮಾರ್ಗದಲ್ಲಿಯೇ ತಮಗೆ ಗಾಳಿಯು

ತಗಲಿ ಪುನಃ ತಮ್ಮ ಮನಸ್ಸು ತಿರುಗಿದರೆ, ಅದೇ ದಾರಿಯಿಂದ ತಿರುಗಿ ಬರಬೇಕಾದೀತು ?

**ಆನಂದ**—ಎಂಥಾ ಬುದ್ಧಿವಂತನೋ ನೀನು ! ಅವಳ ವಿಷಯವಾಗಿ ನನ್ನ ಮನಸ್ಸು ತಿರುಗುವದೇ—ಎಲವೋ ಅವಳು ಪ್ರತ್ಯಕ್ಷವಾಗಿ ನಾಯಕ ಸಾನಿಯ ಹುಡುಗೆಯು ! ಅವಳಿಗೆ ನಾನು ಅಷ್ಟು ಮಹತ್ವ ಕೊಡತಕ್ಕ ವನೇ—? ಹೋಗು ಗಾಡಿಯನ್ನು ಸಿದ್ಧಪಡಿಸು, ಅವಳಿಗೆ ನನ್ನ ಮನಸ್ಸಿನ ನಿಶ್ಚಯವಾದರೂ ತಿಳಿಯಲಿ—ನಾನೇನು ಅಂತಹ ಪೊಳ್ಳು ಮನುಷ್ಯನಲ್ಲ !—

**ಫಲ್ಗುಣ್ಯಾ**—ಧಣಿಯರೇ ಇಷ್ಟಕ್ಕೇ ಸುಮ್ಮನೆ ಮುಸಾಫರಿಯ ಸಿದ್ಧತೆ ಏಕೆ ? ಅವಳ ಮೇಲೆ ತಮ್ಮ ಪ್ರೀತಿಯೇ ಇಲ್ಲವೆಂದು ಅವಳಿಗೆ ತಿಳಿದರೆ ಸಾಕು-ದಿಂಡುರುಳಿಕೆ ಹಾಕುತ್ತ ಬರುವಳು-ನಿಮ್ಮ ಪಾದಗಳಿಗೆ

**ಆನಂದ**—ಅವಳು ಬಂದರೆ ಹೀಗೆ—ಪದೆಗಳನ್ನು ಹಾಕುವೆನು ! ಅದನ್ನು ಏನು ಹೇಳಿರಿ ? ನೀನೀಗ ಹೋಗು. ನಾನು ಹೇಳಿದ ಕೆಲಸ ವನ್ನು ಮಾಡು.

**ಫಲ್ಗುಣ್ಯಾ**—ಧಣಿಯರೇ—ತಮ್ಮ ಅಪ್ಪಣೆ-ಪಯಣದ ಸಿದ್ಧತೆಯು ತಮ್ಮ ಒಬ್ಬರಿಗೋಸ್ಕರವೇ ಮಾಡಬೇಕಲ್ಲವೇ ? ಬಟ್ಟೆ-ಬರೆಗಳು ಹೆಚ್ಚು ಬೇಡವಷ್ಟೆ?

**ಆನಂದ**—ಇಲ್ಲ-ಎಲ್ಲವೂ ಬೇಕು. ಒಂದು ತಿಂಗಳು ಪ್ರವಾಸ-ಅಂದಮೇಲೆ ಬೇಕಾಗುವಷ್ಟು ಎಲ್ಲವನ್ನೂ ಸಿದ್ಧಗೊಳಿಸು.

**ಫಲ್ಗುಣ್ಯಾ**—ಧಣಿಯರೇ ಅಷ್ಟು ದಿವಸವೇಕೆ ಬೇಕು ?

**ಆನಂದ**—ಅದೆಲ್ಲ ನಿನಗೇಕೆ ಬೇಕು ? ಮನಸ್ಸಿನಲ್ಲಿ ಬಂತು-ನಿಶ್ಚಯಮಾಡಿದೆ, ಇನ್ನು ಮೇಲೆ ಅದು ಎಂದಿಗೂ ತಿರುಗಲಾರದು. ಹೂ-ನಡೆ-ಹೋಗು ಮೊದಲು-(ಅವನು ಹೋಗ ಹತ್ತುವನು) ನಾನು ಶತತಾರೆಯ ಗರ್ವ ವನ್ನು ಮುರಿಯುವದು ಹೀಗೆ ! ಅಂದರೆ ಒಂದು ತಿಂಗಳು ಅವಳ ದರ್ಶನ ವಾಗುವದಿಲ್ಲ, ಮತ್ತು-ಇಷ್ಟು ಅವಧಿಯಲ್ಲಿ ಅವಳ ವಿಸ್ಮರಣೆಯಾದರೂ ಆದೀತು. ಅವಳ ನೆನಪಾಯಿತೋ ನನ್ನ ಸರ್ವಾಂಗವೆಲ್ಲವೂ

ವುರಿಯುವದು- ಹಾಗೆ–ಸ್ವಲ್ಪ ದಯವೂ ವುಂಟಾಗುವದು. ಒಮ್ಮೊಮ್ಮೆ ಮನಸ್ಸು ಅವಳ ವಿಚಾರದ ಕಡೆಗೇ ನುಗ್ಗುವದು-ಈಗಾದರೂ ಏನಾ ಗಿದೆ ?—ಛೆ–ಛೆ–ಇಂತಹ ಹೇಡಿತನವು ಉಪಯೋಗದ್ದಲ್ಲ! ಅವಳ ವಿಷಯವನ್ನು ತಲೆಯಲ್ಲಿಯೇ ತರಕೂಡದು. ಆದರೇ-(ಗಟ್ಟಿಯಾಗಿ) ಫಲ್ಗುಣ್ಯಾ ಏ ಫಲ್ಗುಣ್ಯಾ—ಹೋಗಿಲ್ಲವೇ ನೀನು ! ಆ ಕಾಗದವನ್ನು ಸುಟ್ಟು ಬೂದಿ ಮಾಡೆಂದು ನಾನು ನಿನಗೆ ಆಗಲೇ ಹೇಳಿದೆನಲ್ಲವೇ— ನೀನು ಹಾಗೆ ಮಾಡಿರಲಿಕ್ಕಿಲ್ಲ ? ನೀನು ಎಂದೂ ಹಾಗೆ ಮಾಡತಕ್ಕವ ನಲ್ಲ–ಎಲ್ಲಿದೆ–ಆ ಕಾಗದ ಅದನ್ನು ಇಲ್ಲಿ ತಾ-ಅಥವಾ ಆ ಮೂಲೆಯಲ್ಲಾ ದರು ಚೆಲ್ಲು.

**ಫಲುಗುಣ್ಯಾ**—ನೀವು ಬೇಡುವಿರೆಂದು ನಾನು ಆಗಲೇ ತಿಳಿದಿದ್ದೆನು ಇದೋ ತೆಗೆದುಕೊಳ್ಳಿರಿ. ಧಣಿಯರೇ–ನಾನು–ಗಾಡಿ ತರಲು ಹೋಗುತೀ—

**ಆನಂದ**—ಎಲೋ ಮೇಲಿಂದ ಮೇಲೆ ಅದನ್ನೇನು ಕೇಳುವೆ ? ಅಯಿನೂರ ಅಂಕಿ ಎಣಿಸುವದೊರಳಗಾಗಿ ಗಾಡಿ ಸಿದ್ಧವಾಗಬೇಕು.

(ಅಪ್ಪಣೆ ಎಂದು ಫಲ್ಗುಣ್ಯಾ ಹೋಗುವನು)

ಪತ್ರವನ್ನು ಹರಿದು ಹಾಕುವದಂತು ನಿಶ್ಚಯವೇ-ಆದರೆ, ಅದರ ಸಂಬಂಧವಾಗಿ ಏನು ಬರೆಯುವಳು ? ಅದನ್ನಾದರೂ ನೋಡೋಣ ! (ಓದುತ್ತಾನೆ) ಪ್ರಿಯ ವಲ್ಲಭನ ಚರಣ ಸನ್ನಿಧಾನಕ್ಕೆ - ನಮ್ರ ದಾಸಿ ಯಾದ ಶತತಾರೆಯ ಬಿನ್ನಹವು-ಕೆಲಹೊತ್ತಿನಾಚೆ-ನಾನು ತಮಗೆ ಸ್ವಲ್ಪ ಚೇಷ್ಟೆ ಮಾಡಿದೆನು. ಅದರ ಬಗ್ಗೆ ಈಗ ನನಗೆ ಕೆಡಕೆನಿಸುವುದು,— ಮತ್ತು ಆ ಹೊತ್ತಿನಿಂದ ಮನಸಿಗೆ ಒಂದು ಪ್ರಕಾರದ ಅಸಮಾಧಾನ ವಾಗಿದೆ. ಈ ಬಡದಾಸಿಯನ್ನು ಕ್ಷಮಿಸಬೇಕು ; ಮತ್ತು ದಯವಿಟ್ಟು ಒಂದುಸಲ ಭೇಟಿಯಾಗಬೇಕು. ಅಂದರೆ ನನ್ನ ವಿಷಯವಾಗಿ ತಮ ಗುಂಟಾದ ಸಂಶಯವನ್ನು ದೂರ ಮಾಡುತ್ತೇನೆ. ಅಜ್ಞ ದಾಸಿಯಾದ ನಾನು ಅಧಿಕವೇನು ಬರೆಯಲಿ ? ಇಂತೀ ವಿಜ್ಞಾಪನೆಗಳು " ಎಂಥಹ ಭ್ರಮಿಷ್ಟ ವಾರಾಂಗನೆ ಇವಳು ! ನನ್ನ ಸಂಶಯವನ್ನು ಇವಳು ದೂರ ಮಾಡತಕ್ಕವಳೇ ? ನನ್ನ ಸಂಶಯವು ಎಂದೋ ದೂರವಾಗಿದೆ ! ಮನ

ದಟ್ಟಾಗಿ ಹೋಗಿದೆ !! ಇನ್ನು ಮೇಲೆ ಇಂತಹ ಸವಿಮಾತಿನಿಂದ ಒಪ್ಪಿಗೆ ಯಾದೀತೆ ? (ಪತ್ರವನ್ನು ಹರಿಯುತ್ತಾ) ಅಂತೂ ಮನಸ್ಸಿಗೆ ಚುರುಕು ಚನ್ನಾಗಿ ಹತ್ತಿಹೋಗಿದೆ. ಅಂತೇ-ಅಪರಾಧವನ್ನು ಕ್ಷಮಿಸಬೇಕು ! ಇನ್ನು ಕ್ಷಮಿಸುವದು ಬೇಡ, ನೀನೂ ಬೇಡ ! ಮತ್ತೇನು ಬರೆದಿರು ವಳು ? "ಅಜ್ಞದಾಸಿಯಾದ ನಾನು ಅಧಿಕವೇನು ಬರೆಯಲಿ ?" ನಿಜ ವಾಗಿಯೂ ನೀನು ಅಜ್ಞಳೇ,-ಇಲ್ಲವಾದರೆ ಹೀಗೆ ಪತ್ರವನ್ನೇ ಬರೆಯು ತ್ತಿರಲಿಲ್ಲ. ಮತ್ತೆ-ನಾನು ಪ್ರಿಯ ವಲ್ಲಭನಂತೆ—ಪ್ರಿಯ ವಲ್ಲಭ !! ನನ್ನಂಥಾ ಪ್ರಿಯ ವಲ್ಲಭರು ಎಷ್ಟು ಮಂದಿಯೋ ಇವಳಿಗೆ - ದೇವರೇ ಬಲ್ಲ ! (ತ್ವೇಷದಿಂದ) ಕುಲಕಂಟಕೀ, ವಿಶ್ವಾಸಘಾತಕೀ-ಒಳ್ಳೆ ಕೆಲಸವಾ ಯಿತು, ನನ್ನ ದೈವವು ಪ್ರಬಲವಾಗಿತ್ತೆಂದೇ ನಾನು ನಿನ್ನ ಜಾಲದೊಳ ಗಿಂದ ಪಾರಾದೆನು. ಪೂರ್ವದಿಂದಲೂ ನಂದನ ಶೇಟನು ನನಗೆ ಹೇಳು ತ್ತಲೇ ಇದ್ದನು.

ರಾಗ ಭೀಮಪಲಾಸ ತಾಳ ತ್ರಿವಟ

ಬೇಡವೋ ಬಿಡುನೀಗಣಿಕೆಯ ಸಂಗ । ಮೂಢನೆ ತ್ಯಜಿಸು ವಿಚಾರತರಂಗ ॥ಪಲ್ಲ॥
ಹಿತದಿ ಕೇಳುಸವಿ ಮಿತ್ರನ ನುಡಿಯಾ । ಈತೆರಮರುಳಾಗದೆಮದಾಂಧಾ ॥ ಗತಿಗೆಡಿಸು ವುದದು ಯೋಚಿಸುಮನದೇ । ನೀತಿಪಥವಪಿಡಿ ವಿಚಾರಶೀಲಾ ॥೧॥

ಅದೋ ನಂದನಶೇಟನೇ ಬಂದನು.

**ನಂದನಶೇಟ**—(ಪ್ರವೇಶಿಸಿ) ಯಾಕೆ ? ಏನು ಸಮಾಚಾರ ?

**ಆನಂದ**—ಸಮಾಚಾರವೇ - ನಾನು ಒಂದು ತಿಂಗಳು ಪಟ್ಟಣವಾಸವನ್ನು ಬಿಟ್ಟು ಮುಸಾಫರಿಗೆ ಹೋಗಬೇಕೆಂದು ನಿಶ್ಚಯಮಾಡಿದ್ದೇನೆ.

**ನಂದನ**—ಹೊರಡುವದು ಯಾವಾಗ ? ಈ ನಿಶ್ಚಯಕ್ಕೆ ಕಾರಣವೇನು ?

**ಆನಂದ**—ಇದೋ ಈಗಲೇ ಹೊರಟೆ. ಇನ್ನೊಂದು ಅರ್ಧ ಗಳಿಗೆಯಲ್ಲಿ ನನ್ನ ಕುದುರೆಗಾಡಿ ಇಲ್ಲಿಗೇ ಬರುವದು.

**ನಂದನ**—ಒಬ್ಬನೇ ಹೋಗುವೆಯೋ ಅಥವಾ ಸಕುಟುಂಬವೋ ?

**ಆನಂದ**—ನಂದನಶೇಟ-ಇನ್ನು ಮುಂದೆ ಅವಳು ; ಅವಳ ವಿಷಯವನ್ನು,

ನನ್ನ ಮುಂದೆ ತೆಗೆಯಬೇಡ.

**ನಂದನ**—ಆನಂದಶೇಟ—ನಿನಗೆ ಕೋಪ ಬಂದರೂ ಬರಲಿ. ಶತತಾರೆಯ ಮೇಲೆ ನಿನ್ನದು ನಿಷ್ಕಾರಣವಾದ ಕೋಪ! ನಾನು ಅವಳ ಮನೆಗೆ ಹೋಗಿದ್ದೆ–ಅವಳು ನಿನಗೊಂದು ಪತ್ರ ಬರೆಯುತ್ತಿದ್ದಳು.

**ಆನಂದ**—ಅದೋ ನೋಡು-ಅವಳ ಪತ್ರವನ್ನು ಹರಿದು ಅಲ್ಲಿ ಬಿಸಾಕಿದ್ದೇನೆ. ಈ ಸಲ ನಾನು ಹೀಗೆ ನಿರ್ಧರಿಸಿದ್ದೇನೆ—ಇನ್ನು ಮುಂದೆ ಅವಳ ವಿಷಯವಾಗಿ ಎಂದೂ ಮೋಸ—ಹೋಗಕೂಡದು !

**ನಂದನ**—ನಿಷ್ಕಾರಣವಾಗಿ ಸಂಶಯ ತೆಗೆದುಕೊಳ್ಳುವದರಲ್ಲಿ ಏನು ಅರ್ಥವಿದೆ ? ಅವಳ ಕಡೆಗೆ ಲೇಶ ಮಾತ್ರಕ್ಕೂ ದೋಷವಿಲ್ಲ.

**ಆನಂದ**—ಆ ವಿಶ್ವಾಸಘಾತಕಿಯನ್ನು ನನ್ನ ಮುಂದೆ ಸ್ತುತೀ ಮಾಡುವೀ–ಇದಕ್ಕೆ ನಾನೇನು ಮಾಡಲಿ.

**ನಂದನ**—ನಿಜವಾಗಿಯೂ ಅವಳು ಹಾಗೆ ಇದ್ದಿದ್ದರೆ, ನಾನು ಅವಳ ವಿಷಯವಾಗಿ ಯಾವ ಮಾತನ್ನೂ ಆಡುತ್ತಿರಲಿಲ್ಲ! ನಾನು ಎಲ್ಲ ವಿಷಯವನ್ನು ತಿಳಿದುಕೊಂಡಿದ್ದೇನೆ. ಈ ಪ್ರಕರಣದಲ್ಲಿ—ಬಹುಶಃ ಎಲ್ಲ ದೋಷ ನಿನ್ನ ತಲೆಯ ಮೇಲೆಯೇ ಇರುವದು.

**ಆನಂದ**—ಹಾಗೆ ನೀನು ನನ್ನ ಮನಸ್ಸಿಗೆ ಒಪ್ಪಿಗೆ ಮಾಡಿಕೊಟ್ಟರೆ—ನಾನೇ ಅವಳ ಕಡೆಗೆ ಹೋಗಿ ತಪ್ಪು ಒಪ್ಪಿಕೊಂಡು; ಕ್ಷಮೆ ಬೇಡುವದಕ್ಕೆ ಒಂದೇಕಾಲು ಮೇಲೆ—ಸಿದ್ಧನಿದ್ದೇನೆ.

**ನಂದನ**—ನಡೆ ಹಾಗಿದ್ದರೆ-ಅವಳ ಕಡೆಗೇ ಹೋಗೋಣ, ಅಂದರೆ ಅವಳೇ ನಿನ್ನ ಸಂಶಯ ದೂರಮಾಡುವಳು.

**ಆನಂದ**—ಏನಂದೇ-ಅವಳ ಕಡೆಗೆ ಹೋಗುವದೇ-ಅಂದರೆ ನನಗೆ ಚೇಷ್ಟೆ ಮಾಡಬೇಕೆಂದೇ–ನೀನು ಇಲ್ಲಿಗೆ ಬಂದೆಯಾ-ಏನು ? ಎಲೋ ಪುನಹ ಅವಳ ಹೆಸರನ್ನು ಉಚ್ಚರಿಸಲಿಕ್ಕಿಲ್ಲ - ಇದು ನನ್ನ ಸಂಕಲ್ಪವು. ಸಮಯವು ಇಂಥದಿರುವಾಗ, ನೀನು ಹೇಳುವೆ - ಅವಳ ಕಡೆಗೆ ಹೋಗೋಣವೆಂದು! ಅಂದರೆ ಇದರ ಅರ್ಥವು ಇಷ್ಟೇ–, ನಾವೇ

ಸೋತು ಹೋಗಬೇಕು! ಇರಲಿ-ನೀನು ಅವಳನ್ನು ಕಂಡು ಇಲ್ಲಿಗೆ ಬಂದೆಯಲ್ಲವೇ-ಹಾಗಾದರೆ ಈಗ ಅವಳು ಮನೆಯಲ್ಲಿಯೇ ಇರುವಳೇ?

**ನಂದನ**—ಹೌದು-ಅವಳು ಮನೆಯಲ್ಲಿಯೇ ಇದ್ದಾಳೆ.

**ಆನಂದ**—ಇರಲಿ-ಅವಳಕೂಡ ನಾನೇನು ಮಾಡಬೇಕಾಗಿದೆ. ಆದರೆ, ಈ ರೀತಿ ನಾನು ಕೋಪಿಸಿದ ವಿಷಯವಾಗಿ, ಅವಳ ಮನಸ್ಸಿಗೆ ಬಹಳ ವಿಷಾದವಾಗಿದೆಯಲ್ಲವೇ?

**ನಂದನ**—ವಿಷಾದ-! ಆನಂದಶೇಟ ನಾನು ನಿನಗೆ ಏನು ಹೇಳಲಿ? ಹಿಂದಕ್ಕೆ ನಾನು ನಿನ್ನ ಮುಂದೆ ಅವಳ ವಿರುದ್ಧವಾಗಿ ಎಷ್ಟೋ ಸಲ ಮಾತಾಡಿದ್ದೇನು-, ಆದರೆ ಈಗ ನಾನು ನಿನಗೆ ನಿಶ್ಚಯವಾಗಿ ಹೇಳುವದೇನಂದರೆ-, ಅವಳು ನಾಯಕಸಾನಿಯಾದರೂ-, ಒಳ್ಳೆ ಗರತಿಯರನ್ನು ಕೂಡಾ ನಾಚಿಸುವಂತಹ ನಡತೆ ಅವಳದು! ನೀನು ಇಷ್ಟು ತಿರಸ್ಕಾರ ಮಾಡಿ ಮಾತನಾಡಿದರೂ, ನಾನು ಅವಳಲ್ಲಿ ಹೋದಾಗ ನಿನ್ನ ವಿರುದ್ಧವಾಗಿ ಅವಳ ಮುಖದಿಂದ ಚಕಾರ ಶಬ್ದಗಳೇ ಹೊರಡಲಿಲ್ಲ. ಪ್ರತಿಯಾಗಿ ಮೇಲಿಂದ ಮೇಲೆ ನಿನ್ನ ವರ್ಣನೆಯನ್ನೇ ಮಾಡುತ್ತಿದ್ದಳು.

**ಆನಂದ**—ಹೌದು-ಹೌದು-ಅವಳು ಸದ್ಗುಣಿಯೇ ಇದ್ದಾಳೆ-, ಇದಕ್ಕೆ ನಾನು ಪೂರ್ತಿ ಒಪ್ಪಿಕೊಳ್ಳುತ್ತೇನೆ. ಆದರೆ ಬರಿಯ ಅವಳ ಸ್ತೋತ್ರಕ್ಕೇ ನಾನು ಮರುಳಾಗುವದಿಲ್ಲ. ಅವಳ ಸ್ತುತಿ–ಮತ್ತು-ನಿಂದೆ–ಇವೆರಡೂ ನನಗೆ ಸಮವೇ—! ಆದರೆ ನಿನ್ನ ಕೂಡ ಅವಳು ಏನೇನು ಮಾತಾಡಿದಳು? ಅದನ್ನಾದರೂ ಕೇಳೋಣ.

**ನಂದನ**—ನಡೆದ ಯಾವತ್ತೂ ಸಂಗತಿಯನ್ನು ಅವಳು ಹೇಳಿದಳು, ನೋಡೂ, ಹೇಳುವಾಗ ಅವಳ ಕಣ್ಣುಗಳಿಂದ ಒಂದೇ ಸಮನೇ ನೀರು ಸುರಿಯುತ್ತಿದ್ದವು. ಇದರ ಮೇಲಿಂದ ನೀನೇ ವಿಚಾರ ಮಾಡು.

**ಆನಂದ**—ಗೊತ್ತಿದೆ ಬಿಡೋ–ಇಂಥಾ ವೇಷಗಳೆಲ್ಲ! ಅಲ್ಲೋ, (ಕನಿಕರದ ಧ್ವನಿಯಿಂದ) ನಿಜವಾಗಿಯೂ ಅವಳು ಕಣ್ಣೀರು ಹಾಕಿದಳೇ.

**ನಂದನ**—ನಿನ್ನಾಣಿಯಾಗಿ ಹೇಳುತ್ತೇನೆ. ಆಗಿನ ಅವಳ ಸ್ಥಿತಿಯನ್ನು ನೋಡಿ, ನನಗೂ ಒಂದೊಂದು ಸಲ ಕಣ್ಣುಗಳ ಮೇಲೆ ಕೈಯಾಡಿಸುವ

ಪ್ರಸಂಗ ಬಂತು. ಅವಳನ್ನು ಹೀಗೆ ಗೋಳಾಡಿಸುವುದರಲ್ಲಿ ನಿನಗೆ ಯಾವ ಪುರುಷಾರ್ಥವಿದೆಯೋ ನಾಕಾಣೆ.

**ಆನಂದ**—ಎಲೋ - ನಿಷ್ಕಾರಣವಾಗಿ ಗೋಳಾಡಿಸುವದಕ್ಕೆ ನನಗೇನು ಬುದ್ಧಿ ಇಲ್ಲವೇ ? ಆದರೆ ವಿಜಯರಾಯರು ಹೇಳುವ ವಿಷಯವನ್ನು ನೀನು ಕೇಳಿದ್ದರೆ, ನೀನು ಎಂದೂ ಹೀಗೆ ಮಾತಾಡುತ್ತಿರಲಿಲ್ಲ.

**ನಂದನ**—ಅದು ಕೂಡ ನನಗೆ ತಿಳಿದಿರುವದು. ಅದನ್ನೇ ಹೇಳುತ್ತೇನೆ, ಆದರೆ ನೀನು ಮಾತ್ರ ನಿನ್ನ ಮನೋದೇವತೆಯನ್ನು ಸ್ಮರಿಸಿ ಉತ್ತರ ಕೊಡಬೇಕು-ತಿಳಿಯಿತೇ-ಅಂದು ನೀನು ಅವಳು ಕೂಡಿ ಗೊತ್ತುಮಾಡಿ ಕೊಂಡಂತೆ ರಮಾಕಾಂತನ ಗುಡಿಯಲ್ಲಿ ಅವಳು ನಿನಗೆ ಭೇಟಿಯಾ ದಳು, ನೀನು ಅವಳಿಗೆ ನಿನ್ನ ಭಾವಚಿತ್ರವನ್ನು ಕೊಟ್ಟೆ, ದೇವರ ಸಮಕ್ಷಮ ಆಣೆಕ್ರಿಯೆಗಳಾದವು. ಇಲ್ಲಿಯವರೆಗೆ ಎಲ್ಲವೂ ಸರಿಯಾ ಯಿತು. ಮುಂದೆ ಅವಳು ತನ್ನ ಮನೆಗೆ ಹೊರಟಳು-ಎಲೋ ಅವ ಳೆಂದರೆ ಕೇವಲ ಜಾಜೀ ಮಲ್ಲಿಗೆಯಂತಹ ಕೋಮಲ ಹೆಂಗಸು, ಬಿಸಿಲಿನ ಪ್ರಖರತಾಪ ತಡೆಯಲಾರದೆ ಕಣ್ಣಿಗೆ ಕತ್ತಲು ಕವಿಯಿತು - ದಾರಿಯಲ್ಲಿ ಬಿದ್ದಳು. ಇದರಲ್ಲಿ ಅವಳದೇನು ದೋಷ ? ನೀನೇ ಹೇಳು.'

**ಆನಂದ**—ಇದರಲ್ಲಿ ಅವಳ ದೋಷವಿದೆಯೆಂದು ಹೇಳುವಷ್ಟು ನಾನು ನಿರ್ದಯನೇ ?

**ನಂದನ**—ಇನ್ನೇನು ಅವಳು ನೆಲಕ್ಕೆ ಬೀಳತಕ್ಕವಳು-, ಅಷ್ಟರಲ್ಲಿ ಸಮೀಪ ದಲ್ಲಿ ಹೋಗುತ್ತಿರುವ ವಿಜಯರಾಯರು ಅವಳನ್ನು ಜೋಪಾನದಿಂದ ಹಿಡಿದು-ಗಾಳಿ ಹಾಕಿ ಎಚ್ಚರಿಸಿದರು. ಇಲ್ಲಿ ನಿನಗೆ ಏನಾದರೂ ದೋಷ ಕಾಣುವದೇ ನ್ಯಾಯವಾಗಿ ಉತ್ತರ ಕೊಡು.

**ಆನಂದ**—ಇದು ಅವಳ ಅಪರಾಧವೆಂದು ಯಾರೂ ಅನ್ನಲಾರರು.

**ನಂದನ**—ಈಗ ಸರಿಯಾಗಿ ಮಾತನಾಡಿದೆ. ಆ ಸಮಯದಲ್ಲಿ ಅವಳು ತೀರ ಗಾಬರಿಯಾಗಿ ಹೋಗಿದ್ದಳು. ಮೇಲಾಗಿ ಅಪೂರ್ಣವಾದ ಜಾಗೃತಾ ವಸ್ಥೆಯು; ಇಂತಹ ಸ್ಥಿತಿಯಲ್ಲಿ ತನ್ನ ಕಯ್ಯೊಳಗಿನ ಭಾವಚಿತ್ರವು ಜಾರಿ

ಬಿದ್ದದ್ದು, ಅವಳ ಸ್ಮೃತಿಯಲ್ಲಿಯೇ ಇಲ್ಲ. ಇದಾವರೂ ಅವಳ ದೋಷವೆಂದು ಹೇಳುವಿಯಾ?

**ಆನಂದ**—ಛೆ-ಛೆ- ಇದಾದರೂ ಹೇಗೆ ಅವಳ ಅಪರಾಧವಾಗುವದು? ಹೀಗೆ ಹೇಳತಕ್ಕವನು ಶತಮೂರ್ಖನೇ ಸರಿ.

**ನಂದನ**—ನ್ಯಾಯವಾಗಿ ಹೇಳಿದೆ! ಒಳ್ಳೇದು ಕೆಳಗೆ ಬಿದ್ದ ಭಾವಚಿತ್ರ ಎರಡ ನೇಯವರ ಕೈಗೆ ಸಿಕ್ಕರೆ—

**ಆನಂದ**—ಭಾವಚಿತ್ರದ ವಿಷಯವಾಗಿ ಅವಳಲ್ಲಿ ಯಾವ ದೋಷವೂ ಇಲ್ಲ; ಹೀಗೆ ನನಗೆ ಮನವರಿಕೆಯಾಗಿಹೋಯಿತು. ಆದರೆ ವಿಜಯರಾಯರ ಹೆಂಡತಿಯು ನೋಡಿದ ಅಪ್ರಶಸ್ತ ಪ್ರಕಾರದ ಬಗ್ಗೆ ಏನು ಹೇಳುವೆ?

**ನಂದನ**—ಅದನ್ನೇ ಹೇಳುತ್ತೇನೆ ಕೇಳು. ಅವಳು ಅಸ್ತವ್ಯಸ್ತಸ್ಥಿತಿಯಲ್ಲಿ ನೆಲಕ್ಕೆ ಬೀಳುವಷ್ಟರಲ್ಲಿಯೇ, ಸಮೀಪದಲ್ಲಿ ವಿಜಯರಾಯರು ನಿಂತಿದ್ದರು. ಅವರು ಅವಳ ತಲೆಯನ್ನು ತಮ್ಮ ತೊಡೆಯ ಮೇಲೆ ತೆಗೆದುಕೊಂಡರು. ಸ್ಥಿತಿಯು ಹೀಗಿರುವಾಗ, ವಿಜಯರಾಯರ ಹೆಂಡತಿ ಪೂರ್ಣಿಮಾದೇವಿಯು ಇದನ್ನು ನೋಡಿದಳು. ಮೊದಲೇ ಮತ್ಸರದಿಂದ ಉರಿಯುತ್ತಿರುವ ಅವಳಿಗೆ, ಈಗ ವಿಪರೀತ ಕಲ್ಪನೆಯೇ ಬಂದಿತು. ಅದಕ್ಕೆ ಶತತಾರೆಯೇನು ಮಾಡಬೇಕು? ನಿಜವಾಗಿ ಹೇಳು-ನಿನ್ನದೇ ಅಂತಹ ಸ್ಥಿತಿ ಇದ್ದರೆ ಏನು ಮಾಡುತ್ತಿದ್ದೆ?

**ಆನಂದ**—ಒಪ್ಪಿದೆ! ಒಪ್ಪಿದೆ! ಆದರೆ ಇದನ್ನೆಲ್ಲ ನೀನು, ಸತ್ಯವಾಗಿ ಹೇಳುವಿಯಾ? ನನ್ನ ಕೊರಳ ಸಾಕ್ಷಿಯಾಗಿ ಹೇಳುವಿಯಾ?

**ನಂದನ**—ತೀರಾ ಸತ್ಯವೆಂದು ತಿಳಿ. ಇದೋ ನಿನ್ನ ಕೊರಳ ಸಾಕ್ಷಿಯಾಗಿ ಹೇಳುವೆನು.

**ಆನಂದ**—ಹಾಗಾದರೆ ನೋಡು, ಅವಳ ಕಡೆಗೇ ಹೊರಟೆನು. ಅವಳ ಭೆಟ್ಟಿಯಾಗೀ - ಕಾಲು ಬಿದ್ದೂ - ಛಿ - ಛಿ - ಹೇಗಾದರೂ ಮಾಡಿ ಅವಳ ಸಮಾಧಾನ ಮಾಡುವೆನು. ಅವಳನ್ನು ನಗಿಸಿ— ನಾನು ನಕ್ಕಾಗಲೇ— ನನಗೆ ಸಮಾಧಾನ.

**ಫಲುಗುಣ್ಯಾ**—ಧಣಿಯುರೇ ಗಾಡಿಯು ಸಿದ್ಧವಾಗಿದೆ.

**ಆನಂದ**—ಹೋಗು, ಈಗ ಗಾಡಿಯು ಬೇಕಿಲ್ಲ. ನಮ್ಮ ವಿಚಾರವು ಮತ್ತೆ ಬದಲಾಯಿಸಿತು.

**ಫಲುಗುಣ್ಯಾ**—ಮೊದಲೇ ಈ ತರ್ಕವನ್ನು ನಾನು ಮಾಡಿದ್ದೆನು. ಹಾಗಾದರೆ ಕುದುರೆಯನ್ನು ಬಿಚ್ಚಿ ಲಾಯಕ್ಕೆ ಒಯ್ಯಲೇ- ?

**ಆನಂದ**—ನಂದನಶೇಟ ನೀನು ಒಳ್ಳೇ ಕೆಲಸ ಮಾಡಿದೆ. ನೀನಿದ್ದುದರಿಂದಲೇ ಪ್ರಸಂಗವು ಪಾರಾಯಿತು. ಇಲ್ಲವಾಗಿದ್ದರೆ ವಿಪರೀತವಾಗುತ್ತಿತ್ತು-ಪರಿಣಾಮ ! ಅಯ್ಯೋ- ನಿಷ್ಕಾರಣವಾಗಿ ನಾನು ಶತತಾರೆಯನ್ನು ಗೋಳಾಡಿಸಿದೆನು. ಅವಳಿಗೆ ನಾನು ಭೇಟಿಯಾಗಲೇಬೇಕು. (ಗಡಿಬಿಡಿಯಿಂದ) ಫಲುಗುಣ್ಯಾ ಗಾಡಿ—ಆದರೇ ಬೇಡಾ ನಡೆಯುತ್ತಲೆ ಹೋಗೋಣ. ಅಲ್ಲಾ, ಈ ಪೂರ್ಣಿಮಾದೇವಿ ಎಂತಹ ಮೂರ್ಖ ಸ್ತ್ರೀಯುಳು ! ಕಾರಣ ಎಂತಹದು ? ಸಂಶಯವೆಷ್ಟು ವಿಪರೀತ ? ಮೊದಲು ವಿಜಯರಾಯರನ್ನು ಕಂಡು ಭಾವಚಿತ್ರವನ್ನು ಇಸಿದುಕೊಳ್ಳುವೆನು,-ಮತ್ತು ಅದನ್ನೇ ಶತತಾರೆಗೆ ಕಾಣಿಕೆ ಕೊಡುವೆನು. ನಂದನಶೇಟ ನೀನೂ ಹೋಗು. ನಾನು ವಿಜಯರಾಯರ ಕಡೆಗೆ ಹೋಗುತ್ತೇನೆ.

## ಎರಡನೇ ಪ್ರವೇಶ

(ಶತತಾರೆಯು ಮನೆ)

**ಶತತಾರಾ**—(ಸ್ವಗತ) ನನ್ನ ವಿಷಯುವಾಗಿ ಇವರಲ್ಲಿ ಹೇಗೆ ಸಂಶಯ ಹುಟ್ಟಿದ್ದೀತು ?—ನಿಜವಾಗಿ ನೋಡಿದರೆ, ತಿರುಗಿ ಆವರ ಮುಖವನ್ನೇ ನೋಡಬಾರದೆಂದೆನಿಸುವದು. ಆದರೆ ಅವರದಾವರೂ ಏನು ದೋಷವಿದೆ ? ಪೂರ್ಣಿಮಾದೇವಿಯೇ ಇಲ್ಲದ್ದನ್ನು ಹೇಳಿ ಅವರ ಮನಸ್ಸನ್ನು ಕೆಡಿಸಿಬಿಟ್ಟಿರುವಳು. ಆದರಿಂದ ಅವರ ತಲೆಯು ಕೆಟ್ಟುಹೋಗಿರುವದು ! (ಮೃಗಶಿರೆಯು ಬರುವಳು) ಮೃಗಶಿರೇ—ಶೇಟಜೀಯವರ ಕಡೆಗೆ ಕಾಗದ ತೆಗೆದುಕೊಂಡು ಹೋದ ಆಳು ತಿರುಗಿ ಬಂದನೇ—

ರಾಗ ಭೀಮಪಲಾಸ ತಾಳ ತ್ರಿವಟ

ಚಿಂತಿಸುವೆ ಮನದೆ ಜರಿದೆ । ಭ್ರಾಂತಿಯು ಪೋಂದಿರುವೇ ಮಾನಸವೇ ಎಂದು
ಕಾಂಬೆನಾ । ನಂದದ ದಿನವ । ಮಂದ ಭಾಗ್ಯಳು ನಾ ಜಗದೆ ॥ ೧ ॥

**ಮೃಗಶಿರೆ**—ದೇವೀ-ಅವನು ಇನ್ನೂ ಬಂದಿಲ್ಲ.

**ಶತತಾರಾ**—ಯಾಕಿದ್ದೀತು ? ತಡವಾಗಲಿಕ್ಕೆ ಕಾರಣವಿಲ್ಲ. ಮುಖವನ್ನು ನೋಡಿ, - ಅವರ ಸಂಶಯವನ್ನು ದೂರ ಮಾಡಿದಾಗಲೇ ನನಗೆ ಸಮಾಧಾನ ! ಅವರಿಗೆ ಕೋಪ ಬಂದಾಗ ಅವರನ್ನು ಶಾಂತಪಡಿಸುವದನ್ನು ಬಿಟ್ಟು, - ಬದಲಾಗಿ ಅವರಿಗೇ, - ಮನಸ್ಸಿಗೆ ಹತ್ತುವಂತಹ ಮಾತುಗಳನ್ನಾಡಿ ಇನ್ನಷ್ಟು ರೇಗಿಸಿದೆನು. ಇದು ತಪ್ಪು ಕೆಲಸವಾಯಿತು. ಇರಲಿ ವಿಜಯರಾಯರ ಕಡೆಯಿಂದ ಯಾವ ಸಮಾಚಾರ ಬಂದಿದೆ ?

**ಮೃಗಶಿರೆ**—ಅವರು ಬರುತ್ತೇನೆಂದು ಹೇಳಿ ಕಳಿಸಿದ್ದಾರೆ. ಇಷ್ಟರಲ್ಲಿ ಬಂದಾರು.

**ಶತತಾರಾ**—ಅವರು ಬಂದಬಳಿಕ, ಅವರ ಕಡೆಯಿಂದಲೇ ಆನಂದಶೇಟಜಿಯವರ ಮನಸ್ಸಿನ ಸಂಶಯವನ್ನು ದೂರ ಮಾಡಬೇಕು. ಹಾಗೆ ಮಾಡುವದು ಸುಲಭಸಾಧ್ಯವಲ್ಲ. ಆದರೂ ಮನಸ್ಸಿನ ಸಮಾಧಾನ ! ಇನ್ನುಮೇಲೆ ಮಾತ್ರ ನಾನು ಚೆನ್ನಾಗಿ ಬುದ್ಧಿ ಕಲಿತಂತಾಯಿತು. ಯಾವಾಗಲೂ ಸವಾರಿಯ ಮನಸ್ಸಿನ ಸ್ಥಿತಿಯನ್ನು ನೋಡಿಕೊಂಡೇ ನಡೆಯಬೇಕು. (ನೋಡಿ) ಅದೋ ವಿಜಯರಾಯರೇ ಬಂದರು. (ವಿಜಯರಾಯರು ಬರುವರು) ಬನ್ನಿ - ಬನ್ನಿ - ನನ್ನ ವಿಜ್ಞಾಪನೆಯನ್ನು ಮನ್ನಿಸಿ ತಾವು ಬಂದಿರಿ; ನನಗೆ ಬಹಳ ಸಂತೋಷವಾಯಿತು.

**ವಿಜಯ**—ಇದರಲ್ಲೇನು ವಿಶೇಷ ! ಇದು ಹೀಗೆಯೇ ನಡೆಯತಕ್ಕದ್ದು.

**ಶತತಾರಾ**—ತಮಗೆ ಹೇಳಿ ಕಳಿಸಿದ ಕಾರಣವು ಇಷ್ಟೇ—ತಮ್ಮಲ್ಲಿ ಕೆಲವು ಸಂಗತಿಗಳು ಜರುಗಿರುವದು. ಆ ಸಂಬಂಧದಲ್ಲಿ ನಾನೇನು ಮಾತಾಡುವದಿಲ್ಲ; ನನಗೆ ಅದರ ಅಗತ್ಯವೂ ಇಲ್ಲ. ಆದರೆ ಆ ಉರಿಯ ಜಳವು ನನಗೆ ಸ್ವಲ್ಪ ತಗಲಿದ್ದರಿಂದ ಮಾತಾಡಬೇಕಾಗಿದೆ.

**ವಿಜಯ**—ನಿನಗೆ ಆ ಉರಿಯ ಜಳ ಇದೊಂದೇ ಸಲ ತಗಲಿರಬಹುದು; ನಾನು ಹಗಲು-ರಾತ್ರಿ ಆ ಉರಿಯಲ್ಲಿಯೇ ಬೆಂದು ಹೋಗಬೇಕಾಗಿದೆ! ಈ ದುಃಖವನ್ನು ನಾನು ಯಾರ ಮುಂದೆ ಹೇಳಲಿ?

**ಶತತಾರಾ**—ಯಾಕೆ-ತಮ್ಮ ಅಭಿಪ್ರಾಯವೇನು? ತಾವು ಮನಸ್ಸಿನ ಮೇಲೆ ತೆಗೆದುಕೊಂಡರೆ, ನನ್ನ ತೊಂದರೆಯು ದೂರವಾಗುವದು.

**ವಿಜಯ**—ಅದು ಹೇಗೆಂಬುದನ್ನು ಹೇಳು; ಅಂದರೆ ನನ್ನ ಕೈಯಿಂದಾದ ಮಟ್ಟಿಗೆ ನಾನು ಸಹಾಯ ಮಾಡುತ್ತೇನೆ. ಹೀಗೆ ನಾನು ಮನಃಪೂರ್ವಕವಾಗಿ ಆಶ್ವಾಸನ ಕೊಡುತ್ತೇನೆ.

**ಶತತಾರಾ**—ಈಗ ನನ್ನ ಮೇಲೆ ಒದಗಿದ ಪ್ರಸಂಗಕ್ಕೆ ತಮ್ಮ ಹೆಂಡತಿಯವರೇ ಕಾರಣರು.

**ವಿಜಯ**—ತಿಳಿಯಿತು-ತಿಳಿಯಿತು! ಮತ್ತು ಈಗ ಅವಳಿಂದಲೇ ನನ್ನ ಮೇಲೆ ಈ ಪ್ರಸಂಗವು ಒದಗಿದೆ—ಅದನ್ನು ನಿನಗೆ ಹೇಗೆ ಹೇಳಿದರೂ ತಿಳಿಯದು! ಇರಲಿ, ಅವಳು ನಿನಗೆ ಏನು ಮಾಡಿದಳು?

**ಶತತಾರಾ**—ಅವರು ನಮ್ಮ ಸತಿಪತಿಯರ ಮನಸ್ಸು ಕೆಡಿಸಿ, ನನ್ನ ಜನ್ಮವನ್ನೇ ಹಾಳು ಮಾಡಿದರು. ಅವರು ಹೀಗೆ ಮಾಡುವದಕ್ಕೆ, ನಾನು ಅವರ ವಿರೋಧವಾಗಿ ಯಾವ ಅಹಿತವನ್ನು ಬಯಸಿದೆನೋ ತಿಳಿಯದು.

**ವಿಜಯ**—(ಸ್ವಗತ) ಈ ಪ್ರಕಾರವೇನೋ ನವೀನವಾಗಿ ತೋರುವದು. (ಪ್ರ) ಅವಳು ನಿನಗೆ ಮಾಡಿದ ಕೆಡಕು ಯಾವುದು? ಹೇಳು-ನೋಡುವಾ—?

**ಶತತಾರಾ**—ಅವರು ನಮ್ಮ ಯಜಮಾನರ ಮನಸ್ಸನ್ನು ಒಲಿಸಿಕೊಂಡು ನನ್ನ ವಿಷಯವಾಗಿ ಅವರಲ್ಲಿ ಅಪ್ರೀತಿಯನ್ನು ಹುಟ್ಟಿಸಿರುವರು.

**ವಿಜಯ**—ಅಂದರೇ—ನಿಮ್ಮ ಯಜಮಾನರಿಗೂ ಅವಳಿಗೂ ಸ್ನೇಹವಿರುವದಂತೂ ಖಂಡಿತವಷ್ಟೇ—?

**ಶತತಾರಾ**—ಅದನ್ನು ನಾನು ಏನು ಹೇಳಲಿ? ಆದರೆ ಪೂರ್ಣಿಮಾದೇವಿಯವರ ಮನಸ್ಸಿನಲ್ಲಿ ನನ್ನ ವಿಷಯದಲ್ಲಿ ಸವತಿಮತ್ಸರ ಭಾವ ಸೇರಿ ಹೋಗಿದೆ!—ಇದು ಮಾತ್ರ ಸತ್ಯ!

**ವಿಜಯ**—ಏನು ಸವತಿಮತ್ಸರವೇ - ನಿನ್ನ ವಿಷಯವಾಗಿ - ಸವತಿಮತ್ಸ ರವೇ ? ಅದೇಕೆ ?

**ಶತತಾರಾ**—ಆ ರಮಾಕಾಂತನೇ ಬಲ್ಲ. ನಿನ್ನೆ ನಾನು ಮೂರ್ಛೆ ಬೀಳುವ ಕಾಲಕ್ಕೆ ತಾವು ತಡೆದು ಹಿಡಿದದ್ದನ್ನು ನೋಡಿ, ಅವರು ಬೇರೆ ಅರ್ಥ ವನ್ನೇ ಮಾಡಿಕೊಂಡಿರುವರು ; - ಮತ್ತು - ನಮ್ಮ ಯಜಮಾನರಿಗೆ ಹೀಗೆ ಹೇಳಿರುವರು, - ನಮಗೂ ನಿಮಗೂ - ಏನೋ ಸಂಬಂಧಾ....

**ವಿಜಯ**—ದುಷ್ಟೇ-ಹಾ-ತಿಳಿಯಿತು ! ಅವಳು ತನ್ನ ದುಷ್ಟ ಕಾರಸ್ಥಾನವನ್ನು ಮುಚ್ಚಿಕೊಳ್ಳುವದಕ್ಕೆ ಈ ಉಪಾಯವನ್ನು ಯೋಚಿಸಿರುವಳು.

**ಶತತಾರಾ**—ಅದು-ಯೇನೋ-ಆ ಭಗವಂತನೇ ಬಲ್ಲ ; ಆದರೆ ನೀವೇ ಹೇಳಿ,- ಇದರಲ್ಲಿ ಒಂದಕ್ಷರವಾದರೂ ಸತ್ಯವಿದೆಯೆ ? ನಾಯಕಸಾನಿಯರಿಗೆ ಮರ್ಯಾದೆಯೇ ಇಲ್ಲವೇ— ?

**ವಿಜಯ**—ನೀನು ಈ ವಿಷಯದಲ್ಲಿ ಸ್ವಲ್ಪವೂ ಚಿಂತೆಮಾಡಬೇಡ. ನಿಮ್ಮ ಯಜಮಾನರಿಗೆ ನಾನೇ ಸ್ವತಃ ಭೆಟ್ಟಿಯಾಗಿ ಹೇಳುತ್ತೇನೆ. ಈಗಾ ದರೂ ಆಯಿತೇ - ಇರಲಿ ಅವರ ಹೆಸರೇನು ?

**ಶತತಾರಾ**—ಬಹುಶಃ - ಅವರೂ ಇಷ್ಟರಲ್ಲಿ ಬಂದಾರು—! ಅವರ ಹೆಸರು ಆನಂದಶೀಟ.

**ವಿಜಯ**—(ಸಿಟ್ಟಿನಿಂದ) ಏನು ! ಆನಂದಶೀಟ !—

**ಶತತಾರಾ**—ಹೌದು ಅವರೇ - ಯಾಕೆ ಹೆಸರು ಕೇಳಿದ ಕೂಡಲೆ, ತಮ್ಮ ಮುಖಚರ್ಯ ವಿಲಕ್ಷಣವಾಯಿತಲ್ಲ, ತಮಗೆ ಅವರ ಪರಿಚಯುವಿದೆಯೆ?

**ವಿಜಯ**—ಪರಿಚಯುವೇ - ಬರಿ ಸಾಧಾರಣ ಪರಿಚಯುವಲ್ಲ, - ಅವನಿಗೆ ನನ್ನ ಕೈ ಚೆನ್ನಾಗಿ ತೋರಿಸದೇ, - ಅವನನ್ನು ನಾನು ಹೇಗೆ ಮರೆತೇನು ?—

**ಶತತಾರಾ**—(ಚಕಿತಳಾಗಿ) ಅಂದರೆ—

**ವಿಜಯ**—ನನ್ನ ಹೆಂಡತಿಯು ತನ್ನ ದುಷ್ಟ ಕಾರಸ್ಥಾನವನ್ನು ಮುಚ್ಚಿಕೊಳ್ಳು ವದಕ್ಕೆ ಈ ಉಪಾಯವನ್ನು ಮಾಡಿರುವಳೆಂದು ; ನಾನು ಆಗಲೇ ನಿನಗೆ ಹೇಳಲಿಲ್ಲವೇ ? ಅದರೊಳಗೆ ನಿನ್ನ ಯಜಮಾನರ ಅಂಗವೂ ಇರು

ವದು. ಆ ಉಭಯತರೂ ಕೂಡಿ ನಿನ್ನಂತೆಯೇ ನನ್ನಮೇಲೆ ಕೂಡ, ಆರೋಪ ಹೊರಿಸಿರುವರು. ಅಂದರೆ— (ಸಂಕೋಚದಿಂದ) ನಾನು ಮತ್ತು ನೀನು.... ಇದು ಕೇವಲ ಸುಳ್ಳು ಆರೋಪ !

**ಶತತಾರಾ**—ನಾನು ಕೂಡ - ಅಗ್ನಿಯಲ್ಲಿ ನಿಂತು ಹೇಳುತ್ತೇನೆ - ಇದು ಕೇವಲ ಸುಳ್ಳು ಆರೋಪ. ಆದರೆ, ಆನಂದಕೇಟರು ಹೀಗೆ ಮಾಡಿರಬೇಕೆಂದು ನಿಮಗನಿಸುವದೇ—?

**ವಿಜಯ**—ಆ ವಿಷಯವಾಗಿ - ನನಗೆ ಸಂಪೂರ್ಣ ಮನವರಿಕೆಯಾಗಿ ಹೋಗಿದೆ. ಅಂತೆಯೇ ಆ ಉಭಯತರ ವಿಷಯವಾಗಿ ನನ್ನ ಹೃದಯವು ಉರಿಯುತ್ತಿರುವದು.

**ಶತತಾರಾ**—ಇದು - ನನಗೆ ನಿಜವೆನಿಸುವದಿಲ್ಲ. ಆದರೆ - ತಾವು ಇದನ್ನು ಸತ್ಯವಾಗಿ ಹೇಳುವಿರಾ ?

**ವಿಜಯ**—(ಭಾವಚಿತ್ರವನ್ನು ತೋರಿಸುವನು) ಈ ಭಾವಚಿತ್ರವನ್ನು ಅವಳಿಗೆ ಆನಂದಕೇಟರೇ ಕೊಟ್ಟಿರುವರು ; ಮತ್ತು ನಾನೇ ಅವಳ ಕೈಯಿಂದ ಬಲಾತ್ಕಾರದಿಂದ ಕಸಿದುಕೊಂಡೆನು. ಅವಳು ಈ ಭಾವಚಿತ್ರದ ಚುಂಬನ ತೆಗೆದುಕೊಂಡದ್ದನ್ನೂ, ಎದೆಗೆ ಅವಚಿಕೊಂಡದ್ದನ್ನೂ, ನಾನೇ ಪ್ರತ್ಯಕ್ಷ ನೋಡಿರುವೆನು. ಅಂದಮೇಲೆ - ಇನ್ನೆಲ್ಲಿ ಸಂಶಯ ಉಳಿಯಿತು.

**ಶತತಾರಾ**—ಅವರೇ ಈ ಭಾವಚಿತ್ರವನ್ನು ನಿಮ್ಮ ಹೆಂಡತಿಯವರಿಗೆ ಕೊಟ್ಟರೇ? ಅಂದಮೇಲೆ ಮೋಸತನವು ಶಿಖರಕ್ಕೇ ಮುಟ್ಟಿತು. ತಾವೆ ಈ ಭಾವಚಿತ್ರವನ್ನು ಎರಡನೇಯವರಿಗೆ ಕೊಟ್ಟು, ನನ್ನ ಕೂಡ ಸುಮ್ಮನೇ ಕಲಹ ಮಾಡಿದರು. ಅವರು ಕೊಟ್ಟದ್ದೇ ಒಂದು ವೇಳೆ ನಿಜವಾದರೇ—

**ವಿಜಯ**—ನಿಮಗೆ ಆ ವಿಷಯವಾಗಿ ಸಂಶಯವೇ ಬೇಡ. ಅವನು ನನ್ನ ಮನೆಯಲ್ಲಿ ಕಳ್ಳನಂತೆ ಮರೆಗೆ ಅಡಗಿರುವ ಕಾಲಕ್ಕೆ, - ನಾನು ಅವನನ್ನು ನೋಡಿದೆನು, ನನಗೂ ಅವನಿಗೂ ಮಾತು ನಡೆದವು. ಆಗಲೇ ನಾನು ಅವನ ಮಾನಭಂಗವನ್ನು ಚೆನ್ನಾಗಿ ಮಾಡಿದೆನು. ಇಷ್ಟಾದ ಮೇಲೆ ಮತ್ತೇಕೆ ಸಂಶಯ ?

**ಶತತಾರಾ**—ನೀಚರಮ್ಮಾ - ನೀಚರು. ವಚನ ಕೊಟ್ಟೊ - ಪ್ರಮಾಣ ಮಾಡೀ ಹೇಗೆ ಎದೆಯಲ್ಲಿ ಸಕ್ಕರೆಯನ್ನೇ ಬಿತ್ತಿದರು! ಅದೆಲ್ಲ ಮೋಸ ತನವೇ—? ಇನ್ನುಮುಂದೆ ನನ್ನ ಕಲ್ಯಾಣ ಮಾಡುವವರು ತಾವೇ ಸರಿ! ವಿಶೇಷವೇನು ಹೇಳಲಿ?

**ವಿಜಯ**—ನಿನಗೆ ಅದರ ಚಿಂತೆಯೇ ಬೇಡ! ಅವರ ಮೋಸತನವನ್ನು ಬೈಲಿಗೆಳೆದು, ಅವರ ದುರ್ದೆಶೆಯನ್ನು ಮಾಡದಿದ್ದರೆ ನನ್ನ ಹೆಸರು ವಿಜಯರಾಯನೇ ಅಲ್ಲ! ಒಳ್ಳೇದು ನಾನಿನ್ನು ಬರಲೇ—? ಸುಮ್ಮನೆ ಹೊತ್ತು ಕಳೆದು ಪ್ರಯೋಜನವಿಲ್ಲ.

**ಶತತಾರಾ**—ಚೆನ್ನಾಗಿ ದುರ್ದಶೆ ಮಾಡಿರಿ! ಹಾಗೇ ಬಿಡಬೇಡಿರಿ!!

**ವಿಜಯ**—ನನ್ನ ಕೈಲಾದ ಮಟ್ಟಿಗೆ ಸಾಹಸಮಾಡುತ್ತೇನೆ. ಆಯಿತೇ?

**ಶತತಾರಾ**—(ಎಲೆಪಟ್ಟಿ ಕೊಡುತ್ತಾ) (ಸ್ವ) ನಾನು ಕಾಗದ ಬರೆದು ಕಳಿಸಿದ್ದು ತಪ್ಪಾಯಿತು.

(ಪಟ್ಟಿಯನ್ನು ಕೊಡುವಳು. ವಿಜಯರಾಯರು ಹಿಂಜರಿಯುತ್ತ ತಕ್ಕೊಂಡು ಹೋಗುವನು)

ರಾಗ ಕವಾಲಿ ತಾಳ ದಾದರಾ

ಯೋಚಿಸದೇ ಸುಹಿತವ । ನಾ ಮೋಸ ಪೋದೆನಕಟಾ ॥ ಸೂಚಿಸದೇನುಪಾಯಾ । ಸಾನಂದ ಭಾಗ್ಯ ಕಾಣೇ ॥ ಶ್ರೀಮಂತರ ಭಾವ ದುರುಳಾ ಮೇಲ್ । ತೋರ್ಪರೆಂತು ಸರಳಾ ॥ ಸಾಮಾನ್ಯವೆಂದು ವೇಶ್ಯಾ । ತಾವಿಂತು ಮೋಸ ಮಾಳ್ಪರ್ ॥ ೧ ॥ ಅನ್ಯಾಯ ಜಗವು ಸಕಲಾ । ನಾನೆಂತು ನೋಡಿ ಬಾಳ್ವೆ ॥ ೨ ॥

## ಮೂರನೇ ಪ್ರವೇಶ

(ವಿಜಯರಾಯರ ಮನೆಯ ಹಿಂದಿನ ಮಾವಿನ ತೋಪು)

**ವಿಜಯ**—ಅಕೋ ಸಾಯಂಕಾಲವಾಯಿತು. ಕತ್ತಲೆ ಕವಿದು ಯಾವುದೂ ಕಾಣದಂತಾಗಿರುವದು. ಇನ್ನೂ ಈ ಸಪ್ತಮಿಯು ಯಾಕೆ ಬರಲಿಲ್ಲ? ವೃಶ್ಚಿಕನು ತಪ್ಪಿ ಬೇರೆ ಸ್ಥಳವನ್ನು ಹೇಳಿರಬಹುದೆ - ನಾನು ಹೇಳಿದ್ದು ಮಾವಿನ ತೋಪಿನ ಮೂಲೆಯಂದು; - ಅವನು ತಿಳಿದುಕೊಂಡಿರ

ಬಹುದು - ಮೂಲೆಯೊಳಗಿನ ಮಾವಿನ ತೋಪೆಂದು ! (ಸ್ವಲ್ಪ ನೋಡಿ) ಅದೇನು ಕಾಣುವದು ? ಮನುಷ್ಯನೇ ಹೌದು - ಮತ್ತು ಮುಸುಕು ಹಾಕಿಕೊಂಡಂತೆ ಕಾಣುವದು. ಬಹುತರ ಸ್ತ್ರೀಯೆ ಇರಬಹುದು. ಸ್ತ್ರೀಯೆಂದರೆ ಸಪ್ತಮಿಯೋ ! (ಮುಸುಕು ಹಾಕಿಕೊಂಡವಳು ಬರುವಳು)

**ಮುಸುಕಿನವಳು**—ಸುರಕ್ಷಿತವಾಗಿ ಬಂದೆನಮ್ಮಾ , - ವಿಜಯರಾಯರೇ ನಾನು ಬಹಳ ಗಾಬರಿಯಾಗಿದ್ದೇನೆ. ಅಮ್ಮಯ್ಯಾ—

**ವಿಜಯ**—ಆ - ಆ - ಏನಾಯಿತು ?

**ಮುಸುಕಿನವಳು**—ಇದೋ ನೋಡಿರಿ. ನನ್ನ ಸರ್ವಾಂಗವು ಹೇಗೆ ಕಂಪಿಸುತ್ತಿರುವದು ? ಇಂಥ ವೇಳೆಯಲ್ಲಿ ಒಬ್ಬರೇ ತಿರುಗಾಡುವದು - ಸರ್ವಥಾ ಬೇಡವಮ್ಮಾ—

**ವಿಜಯ**—ಏನಾಯಿತು ? ಆದದ್ದಾದರೂ ಏನು ? ಹೇಳು ಮೊದಲು.

**ಮುಸುಕಿನವಳು**—ವಿಜಯರಾಯರೇ ಏನು ಹೇಳಲಿ – ನಾನು ಬರುವಾಗ ಮಾರ್ಗದಲ್ಲಿ - ಯಾರೋ ಒಬ್ಬ ಲತ್ತೀಕ್ಷ್ಮರನು ಭೇಟಿಯಾದನು. ಆ ಸಂಗತಿಯನ್ನು ಇಲ್ಲಿ ಹೇಳುವದಿಲ್ಲ. ನನ್ನನ್ನು ಮೊದಲು ನಿಮ್ಮ ಮನೆಗೆ ಕರೆದುಕೊಂಡು ಹೋಗಿರಿ.

**ವಿಜಯ**—ಏನಂದೇ - ನಮ್ಮ ಮನೆಗೆ ಹೋಗುವುದೇ - ಛೀ ಛೀ - ಎರಡನೆಯ ಕಡೆಗೆ ಹೋದರೆ ನಡೆಯುವದಿಲ್ಲವೇ ?

**ಮುಸುಕಿನವಳು**—ನನ್ನ ಪ್ರಾಣ ಹೋದರೂ, ನಾನು ಎರಡನೇ ಕಡೆಗೆ ಬರತಕ್ಕವಳಲ್ಲ.

**ವಿಜಯ**—(ಸ್ವಗತ) ಇವಳಂತೂ ಹೀಗೆ ಹಟ ಹಿಡಿದಳು. ಇನ್ನು ಮುಂದೆ ಹೇಗೆ ? ಹೌದು - ಈಗ ನೆನಪಿಗೆ ಬಂತು. ನಮ್ಮ ಪತ್ನಿಯವರು ಮನೆಯಲ್ಲಿ ಇಲ್ಲ. (ಪ್ರಕಾಶ) ಹಾಗೇ ಆಗಲಿ ಅಲ್ಲಿಗೇ ಹೋಗೋಣ ; ಮತ್ತೆಲ್ಲಿಯಾದರೂ - ಹೋಗಿದ್ದರೆ ನಮ್ಮ ಹೆಂಡತಿಯ ಭಯವೇ ಇರುತ್ತಿರಲಿಲ್ಲ.

**ಮುಸುಕಿನವಳು**—ಅದೇನೂ ಇಲ್ಲ -. ಏನಾದರೂ ಮಾಡಿ ನನ್ನನ್ನು ನಿಮ್ಮ ಮನೆಗೇ ಕರೆದುಕೊಂಡು ಹೋಗಿರಿ.

**ವಿಜಯ**—ನಡೆ - ಹಾಗಾದರೆ ! ಅವಳಿಗಾದರೂ ನಾವು, ಇಷ್ಟೇಕೆ ಅಂಜಬೇಕು ? (ವೃಶ್ಚಿಕನನ್ನು ಕರೆಯುವನು) ಏ - ವೃಶ್ಚಿಕಾ - ಹೀಗೆ ಬಾ - ನಾವು ಮನೆಯಿಂದ ಹೊರಬಿದ್ದಾಗ, ಅವಳು ಮನೆಯಲ್ಲಿ ಇರಲಿಲ್ಲವಲ್ಲವೇ ?

**ವೃಶ್ಚಿಕ**—ಧಣಿಯರೇ ಅವರು ಇರಲಿಲ್ಲ.

**ವಿಜಯ**—ಸರಿ ಹಾಗಾದರೆ - ನೀನು ಮುಂದೆ ಹೋಗಿ ಬಾಗಿಲನ್ನು ತೆರೆದು ಇಡು - ಮತ್ತು ಬಾಗಿಲಿನ ಒಳಮುಗ್ಗಲಿಗೆ ಇರುವ ಕಂದೀಲನ್ನು ಆರಿಸಿ ಬಿಡು ; ಅಂದರೆ ಒಳಗೆ ಹೋಗುವಾಗ ನಾವು ಯಾರಿಗೂ ಕಾಣಿಸುವದಿಲ್ಲ. ಇಷ್ಟು ವ್ಯವಸ್ಥೆ ಮಾಡು. ತಿಳಿಯಿತೇ - ಹೋಗು ಬೇಗನೇ—

**ವೃಶ್ಚಿಕ**—ಆಗಲಿ ಧಣಿಯರೇ—(ಹೋಗುವನು)

**ವಿಜಯ**—(ಅವಳ ಬೆನ್ನಮೇಲೆ ಕೈಹಾಕಿ) ನೀನು ಬಂದದ್ದು ನನಗೆ ಬಹಳ ಸಂತೋಷ ! ಇನ್ನು ಮೆಲ್ಲನೇ ನನ್ನ ಹಿಂದೆಯೇ ಬಾ—

**ಮುಸುಕಿನವಳು**—ಇದು ನಿಮ್ಮ ಮನೆಯವರಿಗೆ ತಿಳಿಯುವದಿಲ್ಲವೇ ?

**ವಿಜಯ**—ನಿನಗೆ ಅದರ ಯೋಚನೆಯೇ ಬೇಡಾ—! ಈ ವಿಷಯ ನಿನಗೆ - ಮತ್ತು ನನಗೆ - ಅಷ್ಟೇ ಗೊತ್ತು. (ಹೋಗುವರು.)

## ನಾಲ್ಕನೇ ಪ್ರವೇಶ

( ವಿಜಯರಾಯರ ಮನೆ - ಆನಂದಶೇಟ ಮತ್ತು ಪ್ರತಿಪದೆ)

**ಪ್ರತಿಪದೆ**—ಒಳ್ಳೆ ಗೊಂದಲವೇ ನಡೆದುಹೋಗಿದೆ ಈ ಮನೆಯಲ್ಲಿ ! ಪತಿಯ ಮನಸ್ಸಿನಲ್ಲಿ ಪತ್ನಿಯ ಬಗ್ಗೆ ಸಂಶಯ, ಮತ್ತು ಪತ್ನಿಯ ಮನಸ್ಸಿನಲ್ಲಿ ಪತಿಯ ಬಗ್ಗೆ ಸಂಶಯ – ಇದಕ್ಕೆಲ್ಲ ಕಾರಣ ಆ ಭಾವಚಿತ್ರ. ಬೇರೆ ಮತ್ತಾವುದೂ ಅಲ್ಲ.

**ಆನಂದ**—ಈ ಗೊಂದಲವನ್ನು ಬಗೆಹರಿಸಬೇಕೆಂದೇ ನಾನು ಇಲ್ಲಿಗೆ ಬಂದದ್ದು, ಮತ್ತು ಅದಕ್ಕಾಗಿಯೇ ನಾನು ವಿಜಯರಾಯರನ್ನು ಕಾಣ ಬೇಕಾಗಿರುವದು; ಕಾರಣ ಅವರು ಬರುವವರೆಗೆ ನಾನು ಇಲ್ಲಿಯೇ ದಾರಿಕಾಯುತ್ತ ಕೂಡುವೆನು. (ಕೂಡ್ರುವನು)

**ಪ್ರತಿಪದೆ**—ನಾನು ಹೇಳುವದೇನಂದರೇ - ನೀವು ಇಲ್ಲಿ ಕೂಡ್ರಕೂಡದು. ಏಕೆಂದರೆ ತಾವು ಇಲ್ಲಿ ಇದ್ದದ್ದು ಅವರ ಕಣ್ಣಿಗೆ ಬಿದ್ದರೆ, ಪುಟವಾದ ಅಗ್ನಿಯಲ್ಲಿ ಎಣ್ಣೆ ಸುರಿದಂತೆಯೇ—!

**ಆನಂದ**—ಅದು ಹೇಗೆ?

**ಪ್ರತಿಪದೆ**—ಅದು ಹೇಗೆಂಬುದನ್ನು ನಾನು ಏನು ಹೇಳಲಿ? ಆದರೆ ತಾವು ಇಲ್ಲಿ ಇರದಿರುವದೇ ವಿಹಿತವು. ಬೇಕಾದರೆ ಸ್ವಲ್ಪವೇಳೆ ಬಿಟ್ಟುಬನ್ನಿರಿ; ಆದರೆ ಈಗ ನೀವು ಹೋಗಲೇ ಬೇಕು. (ಗಾಬರಿಯಾಗಿ) ಅದೋ ಅವರು ಬಂದೇ ಬಂದರು! ಅವರ ಶಬ್ದವೆ ಇದು. ನಡೆಯಿರಿ - ನಡೆ ಯಿರಿ ಬೇಗನೇ ಈ ಬಾಗಿಲಿನಿಂದ - ಹೋಗಿರಿ ಬೇಗನೇ, - ಇನ್ನೇನು ಹೇಳಬೇಕಮ್ಮಾ ಇವರಿಗೇ! - ಅವರು ನಿಮ್ಮನ್ನು ಈ ಮನೆಯಲ್ಲಿ ನೋಡಿದ್ದೇ ಆದರೆ, ದೇವಿಯವರ ಜನ್ಮವನ್ನೇ ಘಾತಮಾಡಿದಂತಾಗು ವದು. ನೀವು ದೇವಿಯವರನ್ನು ಕಾಣಲು ಬಂದಿದ್ದೀರೆಂದು ಒಮ್ಮೆ ಅವರ ತಲೆಯಲ್ಲಿ ಸೇರಿತೆಂದರೆ, ತಿರುಗಿ ಅದನ್ನು ತೆಗೆಯುವದು ಪ್ರತ್ಯಕ್ಷ ದೇವರಿಂದಲೂ ಅಸಾಧ್ಯ—!

**ಆನಂದ**—ಅದರ ಚಿಂತೆ ನಿನಗೆ ಬೇಡ! ಅವರಿಗೆ ಏನಾದರೂ ಸಮಾಧಾನ ಹೇಳುತ್ತೇನೆ.

**ಪ್ರತಿಪದೆ**—ನೀವು ಬೇಕಾದ ಸಮಾಧಾನ ಹೇಳಬಹುದು, ಆದರೆ ಅದು ಅವ ರಿಗೆ ಒಪ್ಪಿಗೆಯಾದರಲ್ಲವೇ—? ಅದೋ ಅವರು ಇತ್ತಕಡೆಗೇ ಬರುವಂತೆ ಕಾಣುತ್ತಿರುವದು. ನಾನು ನೋಡಿಯಾದರೂ ಬರುತ್ತೇನೆ. (ಹೋಗು ವಳು)

**ಆನಂದ**—ಇವಳು ಎಂಥ ಬುದ್ಧಿಗೇಡಿಯು! ಸುಮ್ಮನೇ ಅದೆಷ್ಟು ಭಯ

ಪಡುತ್ತಿದ್ದಾಳೆ! ಅದು ಏನೇ ಆಗಲೀ ವಿಜಯರಾಯರು ಬರುವವರೆಗೆ ನಾನು ಇಲ್ಲಿಯೇ ಕುಳಿತುಕೊಳ್ಳುವೆನು!

**ಪ್ರತಿಪದೆ**—(ಗಾಬರಿಯಿಂದ) ಬಂದರು - ಬಂದರು - ಅದೋ ಅವರೇ ಬಂದರು – ಮತ್ತು ಸಂಗಡ ಯಾರೋ ಮುಸುಕು ಹಾಕಿದ ಸ್ತ್ರೀಯು ಳಿರುವಳು!

**ಆನಂದ**—(ಸ್ವಗತ) ಮುಸುಕು ಹಾಕಿಕೊಂಡ ಸ್ತ್ರೀಯು! ಶತತಾರೆಯೇ ಆಗಿದ್ದೀತೆ? ಪುನಃ ಸಂಶಯ ಬಂತು! (ಪ್ರಕಾಶ) ನೀನು ಅವಳ ಮುಖವನ್ನು ನೋಡಿದೆಯಾ?

**ಪ್ರತಿಪದೆ**—ಮುಸುಗು ಹಾಕಿಕೊಂಡಿರುವಳೆಂದು ಹೇಳಲಿಲ್ಲವೆ? ಆದರೆ ನೀವು ದಯಮಾಡಿ ನಾನು ತೋರಿಸುವ ಸ್ಥಳದಲ್ಲಿ ಅಡಗಿಕೊಂಡು ಕುಳಿತುಕೊಳ್ಳಬೇಕು. ಇಷ್ಟು ಮಾತ್ರ ನನ್ನ ಮೇಲೆ ನೀವು ಉಪಕಾರ ಮಾಡಬೇಕು.

**ಆನಂದ**—ನಿನ್ನಂತೇ ಆಗಲಿ - ನಾನು ಅಡಗಿ ಕುಳಿತುಕೊಳ್ಳುತ್ತೇನೆ. ಆದರೆ ಆ ಮುಸುಕಿನ ಸ್ತ್ರೀಯು ಯಾರೆಂಬುದು ನನಗೆ ತಿಳಿಯಬೇಕು. ಎಲ್ಲಿ ಕೂಡಲಿ, ಬೇರೆ ಕೊಠಡಿ ಇರುವುದೇ?

**ಪ್ರತಿಪದೆ**—ವಿಜಯರಾಯರು ಬಂದು ಹೋಗುವವರೆಗೆ, ಈ ಕೊಠಡಿಯಲ್ಲಿ ಕುಳಿತುಕೊಳ್ಳಿರಿ. ಸ್ವಲ್ಪ ಹೊತ್ತು ಅಷ್ಟೇ! ಹೂ ನಡೆಯಿರಿ.—

**ಆನಂದ**—(ಪೇಟಾ ಮತ್ತು ಜೋಡುಗಳನ್ನು ಕೈಯಲ್ಲಿ ತಕ್ಕೊಂಡು) ನಡೆ - ನಡೆ, - ಕೊಠಡಿಯಲ್ಲಾದರೂ ಬಚ್ಚಿಡು, ಅಥವಾ ಹಾಸಿಗೆಯ ಸುರುಳಿಯಲ್ಲಾದರೂ ಬಚ್ಚಿಡು, ಬೇಕಾದ್ದು ಮಾಡು. (ಆತ್ಮಗತ) ಒಂದು ವೇಳೆ ಅವಳು ಶತತಾರೆಯೇ ಆಗಿದ್ದರೆ!

**ಪ್ರತಿಪದೆ**—(ಅವನನ್ನು ಕೊಠಡಿಯಲ್ಲಿ ಕೂಡಿಸಿ) ಹೂ ಇಲ್ಲಿ ಕುಳಿತುಕೊಳ್ಳಿ! ಹೊರಗಣಿಂದ ನಾನು ಬೀಗ ಹಾಕುತ್ತೇನೆ. ಅಂದರೆ ಯೋಚನೆಯೇ ಇಲ್ಲ.

**ಆನಂದ**—ಒಂದೇ ಏಕೆ - ಎರಡು ಬೀಗ ಹಾಕು. (ಬೀಗ ಹಾಕುತ್ತಾಳೆ. ವಿಜಯರಾಯರು ಮತ್ತು ಮುಸುಕು ಹಾಕಿಕೊಂಡವಳೂ ಬರುತ್ತಾರೆ)

**ವಿಜಯ**—ನಾನು ಹೇಳಿದ್ದಕ್ಕೆ ನೀನು ಒಪ್ಪಿದರೆ, ನೀನು ಬೇಡಿದ್ದನ್ನು ಕೊಡುವೆನು. ಇನ್ನು ಮೇಲೇಕೆ ಈ ಮುಸುಕು! ತೆಗೆ ಅದನ್ನು—

**ಮುಸುಕಿನವಳು**—ಬೇಡ ಬೇಡ - ಅದೋ ಕೇಳಿದಿರಾ, - ಯಾರೋ ಮಾತನಾಡುತ್ತಿರುವಂತೆ ಕೇಳಿಸುತ್ತಿರುವದು. ಯಾರಾದರೂ ನೋಡಿದರೆ, ಏನು ಅವಸ್ಥೆಯಾದೀತು?

**ವಿಜಯ**—ಏನೇ - ಇಲ್ಲಿಗಾರು ಬರುವರು - ನೋಡುವದಕ್ಕೆ, - ಸುಮ್ಮನೆ ಅಂಜಬೇಡ. ಈಗ ನಾನು ಹೇಳುವದನ್ನು ಕೇಳು; ಅಂದರೆ ನಿನ್ನನ್ನು ನಾನು ಇಡೀ ಜನ್ಮ ಮರೆಯುವದಿಲ್ಲ. ಇದೊ ತೆಗೆದುಕೋ ವಚನ!

**ಮುಸುಕಿನವಳು**—ಆದರೇ - ನನಗೂ ನಿಮಗೂ ನಡೆದ ಈ ಏಕಾಂತವು ನಿಮ್ಮ ಹೆಂಡತಿಗೆ ತಿಳಿದರೆ, ನನ್ನ ಪಾಡು ಏನಾದೀತು?

**ವಿಜಯ**—ಏನೆ ಅವಳಿಗೆ ಹೇಗೆ ತಿಳಿಯುವದು. ಇನ್ನುಮೇಲೆ ಮುಸುಕು ತೆಗೆ.

**ಮುಸುಕಿನವಳು**—ನಾನೊಲ್ಲೆನಪ್ಪಾ - ಯಾರಾದರೂ ನೋಡಿದರೇ—

**ವಿಜಯ**—ಬಾಗಿಲಿಗೆ ಕೊಂಡಿಯನ್ನು ಹಾಕಿಕೊಂಡು ಬರುತ್ತೇನೆ. ಅಂದ ಮೇಲಾದರೂ ಆಯಿತೆ? ಈ ಸ್ತ್ರೀಯರು ಎಷ್ಟು ಪುಕ್ಕರಪ್ಪಾ!—

**ಮುಸುಕಿನವಳು**—ನೀವೇನು ದಂಪತಿಗಳು, ಈ ತಾಸಿನಲ್ಲಿ ಜಗಳವಾಡಿ, ಮುಂದಿನ ತಾಸಿನಲ್ಲಿ ಕೂಡಿಕೊಳ್ಳುವಿರಿ! ನಿಮ್ಮಿಬ್ಬರ ಮಧ್ಯದಲ್ಲಿ ನಮಗೆ ಮಾತ್ರ ಸಂಕಟ!

**ವಿಜಯ**—ಮತ್ತೂ ಅದೇ ಮಾತು ನಿನ್ನದು. ಅಲ್ಲಾ! ಒಮ್ಮೆ ಕಳಚಿದ ಹಣ್ಣು ಮತ್ತೆ ಎಂದಾದರೂ ಅಂಟಿಕೊಂಡೀತೆ? ಇದಲ್ಲದೆ ಆ ನೀಚ ಹೆಂಡತಿಯ ವಿಷಯಕ್ಕೆ ನನಗೆ ಎಂದೋ ತಿರಸ್ಕಾರವಾಗಿ ಹೋಗಿದೆ. ಇನ್ನು ಅವಳ ಮುಖವೇ ನನಗೆ ಬೇಡ! ಮಾತು - ದೂರ—!

**ಮುಸುಕಿನವಳು**—ಈ ನಿಮ್ಮ ಮಾತುಗಳ ಮೇಲೆ ನಾನು ಹೇಗೆ ವಿಶ್ವಾಸ ಇಡಲಿ.

**ವಿಜಯ**—ಇದೋ ಕೊರಳ ಸಾಕ್ಷಿಯಾಗಿ ಹೇಳುತ್ತೇನೆ. ಇನ್ನಾದರೂ ವಿಶ್ವಾಸವಾಯಿತೆ?

**ಮುಸುಕಿನವಳು**—ಹಾಗಿದ್ದರೆ ನಾನು ಒಪ್ಪಿದೆನು. ನಾನು ಮುಸುಕು ತೆಗೆಯುತ್ತೇನೆ. (ತೆಗೆದು) ಏಕೆ ಭಯಪಡುತ್ತೀರಿ? ನನ್ನ ಭಯ ನಿಮಗೇಕೆ?

**ವಿಜಯ**—(ಸ್ವ) ಎಲಾ—! ಇವಳು - ನನ್ನ - ಹೆಂಡತಿಯು—!

**ಪೂರ್ಣಿಮಾ**—ಏಕೆ? ಈಗೇಕೆ ಸುಮ್ಮನಾದಿರಿ? ವಚನ ಕೊಟ್ಟಿರುವಿರಿ? ಜೋಕೆ—ನನ್ನ ಕೈಯಲ್ಲಿ ಸಿಕ್ಕಿರುವಿರಿ! ಏಕೆ-ಸುಳ್ಳು ಹೇಳುವದಕ್ಕೆ ತೋಚಲೊಲ್ಲದೇ—?

**ವಿಜಯ**—ನೀನು ಬೇಕಾದ್ದು ಅನ್ನು. ಇದೆಲ್ಲ ಆ ಕತ್ತೆ ವೃಶ್ಚಿಕನದೇ ಪ್ರೋಕರಿತನವಲ್ಲವೇ? ಅದು ಹೇಗೆಂಬುದನ್ನು ಹೇಳುತ್ತೇನೆ ಕೇಳು.

**ಪೂರ್ಣಿಮಾ**—ಹೇಳಿರಿ - ಹೇಳಿರಿ. ಆ ಕತ್ತೆ ವೃಶ್ಚಿಕನು ಈ ಸಾತ್ವಿಕ ಶಂಕರನಿಗೆ ಯಾವ ಮೋಸ ಮಾಡಿದನು?

**ವಿಜಯ**—ಹಾಗಲ್ಲವೇ - ನನ್ನ ಮುದ್ದಿನ ಅರಗಿಣಿಯೇ—!

**ಪೂರ್ಣಿಮಾ**—ಸಾಕು - ಸಾಕು. ಬಹಳ ಬೇಸರವಾದ ನಾನು, ಈಗಾಗಲೇ ಮುದ್ದಿನ ಅರಗಿಳಿಯಾದೆನಲ್ಲವೇ? "ಆ ನೀಚ ಹೆಂಡತಿಯ ವಿಷಯವಾಗಿ ಬೇಸರವಾಗಿದೆ. ಅವಳ ಮುಖವನ್ನೂ ನೋಡುವದು ಬೇಡ" ಎಂದು ತಾವೇ ಅಲ್ಲವೇ ಮಾತಾಡಿದ್ದು.

**ವಿಜಯ**—ನಿನ್ನ ಬಗ್ಗೆ - ನನ್ನಲ್ಲಿ- ಅಡಗಿದ ಸಂಶಯವನ್ನು ಹೋಗಲಾಡಿಸಲು, ನಾನು ಈ ಯುಕ್ತಿಯನ್ನು ಮಾಡಿದೆ. ತಿಳಿಯಿತೆ?

**ಪೂರ್ಣಿಮಾ**—"ಇದೊಂದು ಕೆಲಸವನ್ನು ನೀನು ಮಾಡಿದರೆ, ಇಡೀ ಜನ್ಮ ನಿನ್ನ ಉಪಕಾರ ಮರೆಯುವದಿಲ್ಲ" ವೆಂದು ನೀವು ಹೇಳಿದಿರಿ! ಅದೂ ಒಂದು ಯುಕ್ತಿಯೇ ಅಲ್ಲವೇ?

**ವಿಜಯ**—ಅಲ್ಲದೇ ಮತ್ತೇನು? ನಾನು ಸಪ್ತಮಿಗೆ ಹೇಳಿಕಳುಹಿಸಿದ್ದು ನಿನಗೆ ತಿಳಿಯಬೇಕು; ಆಮೇಲೆ ನೀನೇ ಮುಸುಕು ಹಾಕಿಕೊಂಡು ನನ್ನ ಭೆಟ್ಟಿಗೆ ಬರಬೇಕು. ಹೀಗೆ ಸರಿಯಾಗಿ ಎಲ್ಲವೂ ಕೂಡಿ ಬರಬೇಕೆಂದೇ ನಾನು ಏರ್ಪಾಟು ಮಾಡಿದ್ದೆ. ಜನರು ಮಾತಾಡುವದು ಸುಳ್ಳು! ಸುಮ್ಮನೇ ಸಂಶಯ ತಕ್ಕೊಳ್ಳುವದು ಬಹಳ ಕೆಟ್ಟದ್ದು. ಈ ವಿಷಯ

ನಿನಗೆ ಚೆನ್ನಾಗಿ ತಿಳಿಯಲೆಂದೇ ನಾನು ಹೀಗೆ ಮಾಡಿದ್ದು—! ತಿಳಿಯಿತೇ—?

**ಪೂರ್ಣಿಮಾ**—ಬಹಳ ಚೆನ್ನಾಗಿ ಮಾಡಿದಿರಿ. ನಾನು ಈಗಲೇ ಅಣ್ಣನಿಗೆ ಕಾಗದ ಬರೆದು ಕರೆಸಿಕೊಳ್ಳುವೆನು.

**ವಿಜಯ**—ಕರೆಸಿಕೊ – ಅಪಮಾನವಾಗುವದು ನಿನ್ನದೇ—!

**ಪೂರ್ಣಿಮಾ**— ಯಾರದಾಗುವದೋ ನೋಡುತ್ತೇನೆ! ನಿಮ್ಮದೋ – ನನ್ನದೊ! (ಕೊಠಡಿಯ ಬಾಗಿಲ ಹತ್ತಿರ ಬಂದು) ಬೀಗ ಹಾಕಿದವರು ಯಾರು? ತಾವೇ ಹಾಕಿರಬಹುದು. ಆ ತಿಳಿಯಿತು ನಾನು ಹೊರಗೆ ಹೋಗಿರುವೆನೆಂದು, ಯಾವಳಾದರೂ ಔಷಧ ಕುಡಿಯುತ್ತ ಕುಳಿತಿರಬೇಕು!

**ವಿಜಯ**—ಭಲೆ! ಭಲೆ—! ಎಂಥಾ ಕಲ್ಪನೆ ಮಾಡಿದೆ ನೀನು! ಹುಚ್ಚೀ – ಹಳೇ ಹುಚ್ಚೀ—!

**ಪೂರ್ಣಿಮಾ**—ಸುಮ್ಮನೆ ಬೀಗದ ಕೈ ಕೊಡುವಿರೋ - ಅಥವಾ ಬೀಗವನ್ನೇ ಮುರಿಯಿಲೋ? ಒಳಗೆ ಯಾರಿರುವರೆಂಬುದನ್ನು ನಾನು ನೋಡದೆ ಬಿಡುವದಿಲ್ಲ.

**ವಿಜಯ**—ನೋಡದೇ - ನೀನು - ಬಿಡುವಿಯಾ? ಹೆಚ್ಚಿನ ಹಟಮಾರೀ! ನನಗೆ ಗೊತ್ತಿಲ್ಲವೇ?

**ಪೂರ್ಣಿಮಾ**—ಯಾರು ಹೊರಗೆ—? ಪ್ರತಿಪದೆ ನನ್ನ ಕೊಠಡಿಯಲ್ಲಿ - ಬಾಗಿಲು ಹಾಕಿಕೊಂಡು ಯಾರು ಕುಳಿತಿರುವರು? (ಪ್ರತಿಪದೆಯು ಬರುವಳು)

**ಪೂರ್ಣಿಮಾ**—ಏನೇ ಇದರ ಬೀಗದ ಕೈ ಎಲ್ಲಿದೆ?

**ಪ್ರತಿಪದೆ**—ಅಮ್ಮನವರೇ ನನ್ನ ಹತ್ತಿರಲೇ ಇದೆ! (ಮೆಲ್ಲನೆ ಹೇಳುವಳು)

**ಪೂರ್ಣಿಮಾ**—ಮೊದಲು ಇಲ್ಲಿ – ತಾ – ಅದನ್ನು—

**ಪ್ರತಿಪದೆ**—(ಅವಳ ಕಿವಿಯಲ್ಲಿ) ದೇವಿಯವರೇ ಅದು ಈಗ **ಬೇಡ.** (ಪ್ರ) ಬೀಗದ ಕೈ ಇರುವದು; ಆದರೆ ಅದು ಈಗ ನನ್ನ ಹತ್ತಿರವಿಲ್ಲ.

(ಮೆಲ್ಲನೇ) ಯಜಮಾನರು ಹೋದನಂತರ ಕೊಡುವೆನು. ಈಗ ಬೇಡ—!

**ಪೂರ್ಣಿಮಾ**—ಬೇಡವೆಂದು ಹೇಳತಕ್ಕವಳು ನೀನಾರು? ತಾ ಅದನ್ನು ಮೊದಲು!

**ವಿಜಯ**—(ಸ್ವ) ಮೊದಲು ಇರುವದೆಂದು ಹೇಳಿದಳು; ಆದರೆ ಕೊಡದಿರಲು ಕಾರಣವೇನು? ಇಲ್ಲಿ ಯಾವುದೋ ಕಂತ್ರಾಟವಿದೆ. ಬೀಗದ ಕೈಯನ್ನು ಅವಳ ಕೈಯಲ್ಲಿ ಕೊಡಬೇಡ - ನನ್ನ ಕೈಯಲ್ಲಿ ತಾ—!

**ಪೂರ್ಣಿಮಾ**—ಅದೇಕೆ? ಅದು ನನಗೆ ಬೇಕು - ತಾ - ಇಲ್ಲಿ.

**ಪ್ರತಿಪದೆ**—ಕೈ ತಪ್ಪಿ ಎಲ್ಲಿಯೋ ಬಿದ್ದುಹೋಯಿತು. (ಮೆಲ್ಲನೇ) ಅಮ್ಮಾ ಈಗ ಅದನ್ನು ಕೇಳಬೇಡಿರಿ.

**ಪೂರ್ಣಿಮಾ**—ಅದನ್ನೆಲ್ಲ ನಾನು ಕೇಳುವದಿಲ್ಲ.

**ಪ್ರತಿಪದೆ**—ಹಾಗಾದರೆ ತಕ್ಕೊಳ್ಳಿರಿ. (ಕೈ ಕೊಡುವಳು) (ಸ್ವ) ನಾನು ಇಲ್ಲಿಂದ ಹೋಗುವೆನು.

**ಪೂರ್ಣಿಮಾ**—(ಬೀಗವನ್ನು ತೆಗೆಯುತ್ತಾ) ಈಗ ನೋಡಿರಿ! ಎಂಥ ಚಮತ್ಕಾರ ತೋರಿಸುತ್ತೇನೆ!

**ವಿಜಯ**—ತೋರಿಸು! ನೋಡಲು ನಾನು ಸಿದ್ಧನೇ ಇದ್ದೇನೆ.

**ಪೂರ್ಣಿಮಾ**—ಯಾರೇ ನೀನು – ಒಳಗೆ ಇರುವವಳು? ಹೀಗೆ ಹೊರಗೆ ಬಾ ನೋಡುವಾ?

**ಆನಂದಶೇಟ**—(ಹೊರಗೆ ಬಂದು) ನಾನು! ಒಳಗಿದ್ದವನು ನಾನು! ಆನಂದ ಶೇಟ.

**ಪೂರ್ಣಿಮಾ**—ಅಮ್ಮಯ್ಯಾ - ನನ್ನ ಕೊಠಡಿಯಲ್ಲಿ ನೀವು ಹೇಗೆ?

**ವಿಜಯ**—ಹೇಗೆ ಬಂದರು, ಏತಕ್ಕೆ ಬಂದರು, ಅವನ್ನೆಲ್ಲ ನೀನೇ ಬಲ್ಲೆ! ಮತ್ತೂ ಅವರೂ ಬಲ್ಲರು. ಸುಮ್ಮನೇ ಏಕೆ ವಿಚಾರಿಸುವೆ? ಸಂಕೇತದಂತೆ ಬಂದಿರುವರು?

**ಆನಂದ**—ನನ್ನ ಬರವು ನಿಮಗೆ ಚಮತ್ಕಾರವಾಗಿ ಕಾಣುವದು. ಅದು ಸಹಜ ವಾಗಿದೆ !—ಆದರೇ—

**ವಿಜಯ**—ಆದರೆ ಇಲ್ಲ ! ಏನೂ ಇಲ್ಲ ! ಈ ಚಮತ್ಕಾರವು ನನಗೆ ಯಾವಾ ಗಲೊ ಹೊಳೆದು ಹೋಗಿದೆ !

**ಆನಂದ**—ಆದರೆ - ಮೊದಲು - ನಾನು - ಇಲ್ಲಿಗೆ ಏಕೆ ಬಂದದ್ದು, ಅದನ್ನು ಹೇಳುತ್ತೇನೆ; ಆಮೇಲೆ ನೀವು ಬೇಕಾದಂತೆ ಬಡಬಡಿಸಿರಿ. ನಾನು ಬಂದದ್ದು – ನಿಮ್ಮ ಹತ್ತಿರವಿರುವ ನನ್ನ ಭಾವಚಿತ್ರವನ್ನು ಬೇಡುವ ದಕ್ಕೆ ! ನನಗೆ ಅದರ ಅವಶ್ಯಕತೆ ಈಗ - ವಿಶೇಷವಾಗಿದೆ.

**ವಿಜಯ**—ಇದ್ದೀತು - ಇದ್ದೀತು ! ಆದರೆ ನನಗಾದರೂ ಅದರ ಅಗತ್ಯ ಈಗ ವಿಶೇಷವಾಗಿದೆ. ಏಕೆಂದರೆ, ನಿಮ್ಮ ಉಭಯತರ ಸ್ನೇಹಕ್ಕೆ ಇದು ಬಲವಾದ ಸಾಕ್ಷಿಯು !

**ಪೂರ್ಣಿಮಾ**—ಏನು – ನೀವು ಮಾತಾಡಿದ್ದು? "ಉಭಯತರ - ಸ್ನೇಹಕ್ಕೆ" ಪುನಃ ಮಾತು ಹೊರಬೀಳಲಿ – ನೋಡುವಾ ! ಇದೋ - ಆನಂದ ಶೇಟರೇ - ನೀವು ಏಕೆ ಬಂದದ್ದು, ಮತ್ತು ನನ್ನ ಕೋಣೆಯೊಳಗೆ ನಿಮ್ಮ ಪ್ರವೇಶ ಹೇಗಾಯಿತು? ಎಲ್ಲವನ್ನೂ ಸ್ಪಷ್ಟವಾಗಿ ಹೇಳಿರಿ !

**ವಿಜಯ**—ಸ್ವಾಮೀ – ಅವಳು ವಿಚಾರಿಸುತ್ತಾಳೆ; ಈಗಾದರೂ ಹೇಳಿರಿ ! ಏಕೆ – ಹೇಳುವದೇನೆಂಬುದು ಚಟ್ಟನೇ ಹೊಳೆಯಲೊಲ್ಲದೋ ?

**ಆನಂದ**—ನಾನು ಬಂದದ್ದೇಕೆಂಬುದನ್ನು ಆಗಲೇ ಹೇಳಿದ್ದೇನೆ. ಇನ್ನು ಈ ಕೊಠಡಿಯಲ್ಲಿ ನನ್ನ ಪ್ರವೇಶ ಹೇಗಾಯಿತೆಂದು ಕೇಳಿದರೆ, - ಪ್ರತಿ ಪದೆಯು ನನಗೆ ಇಲ್ಲಿ ಕೂಡಲು ಹೇಳಿದಳು.

**ವಿಜಯ**—ಸರಿ - ಇದರಲ್ಲೇನು ತಪ್ಪು ! ಹಾಗೆ ಆದದ್ದೇ ಯೋಗ್ಯವು. ಮೊದಲೇ ಸಂಕೇತವಾಗಿತ್ತು – ಆ ಪ್ರಕಾರ—

**ಆನಂದ**—ಛೆ—ಛೆ—ಹಾಗೆ ಯಾವುದೂ ಇಲ್ಲ. ಸಂಕೇತವಿಲ್ಲ—ಸಂಕೋಚವಿಲ್ಲ !

**ಪೂರ್ಣಿಮಾ**—ನನಗಂತೂ ಇದರೊಳಗಿನ ಒಂದಕ್ಷರವೂ ಗೊತ್ತಿಲ್ಲ !

**ವಿಜಯ**—ಈಗ ಸರಿಯಾಗಿ ಹೊಂದಿತು! ಇಬ್ಬರಿಗೂ ಗೊತ್ತಿಲ್ಲವೇ ಆಯಿತಲ್ಲವೇ?

**ಆನಂದ**—ಇಂತಹ ಅರ್ಥವಿಲ್ಲದ ಮಾತುಗಳು ನನಗೆ ಬೇಡ! ಎಲ್ಲಿದೆ ನನ್ನ ಭಾವಚಿತ್ರ ಅದನ್ನು ಕೊಡಿ ನನಗೆ—!

**ವಿಜಯ**—ಭಾವಚಿತ್ರವೇ - ಅದು ನಿಮಗೆ ಎಂದೂ ದೊರೆಯಲಾರದು.

**ಆನಂದ**—ಅದು ದೊರೆಯುದ ವಿನಹ, ನಾನು ಇಲ್ಲಿಂದ ಕಾಲೇ ಕಿತ್ತುವದಿಲ್ಲ! ಸುಲಭವಾಗಿ ಕೊಟ್ಟರೇ - ಸರಿ! ಇಲ್ಲವಾದರೇ —

**ವಿಜಯ**—ಇಲ್ಲವಾದರೇ— ಇಲ್ಲವಾದರೆ ಏನು ಮಾಡುವೆ ನೀನು? ಇಂತಹ ಪೊಳ್ಳು ಬೆದರಿಕೆಗೆ ಅಂಜುವವನು ನಾನಲ್ಲ ತಿಳಿಯಿತೇ?

**ಆನಂದ**—ಮತ್ತು ನಾನಾದರೂ ನಿಮಗೆ ಬರಿಯ ಪೊಳ್ಳು ಬೆದರಿಕೆಯನ್ನು ತೋರಿಸುವದಿಲ್ಲ–ಸುಲಭವಾಗಿ ಕೊಟ್ಟರೆ ಸರಿ, ಇಲ್ಲವಾದರೆ ನೋಡಿರಿ ಇದನ್ನು (ಶಸ್ತ್ರ ತೋರಿಸುವನು)

**ವಿಜಯ**—(ಭಯಚಕಿತನಾಗಿ) (ಸ್ವಗತ) ಯಾವುದೋ ಒಂದು ಕಾರಣ ಹುಡುಕಿ, ನನ್ನ ಕೊಲೆಯನ್ನೇ ಮಾಡಬೇಕೆಂದು ಇವರ ಹಂಚಿಕೆ ಇದ್ದಂತೆ ಕಾಣುವದು; ಇದಕ್ಕೆಲ್ಲ ಬೆಂಬಲ, ನನ್ನ ಹೆಂಡತಿಯದೇ ಇರಬೇಕು!

**ಆನಂದ**—ಏಕೆ– ನೋಡಿದಿರೋ ಇದನ್ನು—!

**ವಿಜಯ**—ನೋಡಿದೆ - ನಿಮ್ಮ ಶಸ್ತ್ರ! ನನ್ನ ಶಸ್ತ್ರವನ್ನೂ ತೋರಿಸುತ್ತಿದ್ದೆ, ಆದರೆ ಈ ಮರ್ಯಾದೆಗೇಡು ಹೆಂಡತಿಯ ಸಲುವಾಗಿ ನಿಮ್ಮ ಮೇಲೆ ಶಸ್ತ್ರವೆತ್ತುವದಕ್ಕೆ ನನಗೆ ಮನಸ್ಸಿಲ್ಲ! (ಜೇಬಿನಿಂದ ಭಾವಚಿತ್ರ ತೆಗೆಯುತ್ತಾ) ಅದು ಅಲ್ಲದೇ ನನಗಾದರೂ ಈ ಭಾವಚಿತ್ರವೇಕೆ ಬೇಕು? (ನೆಲಕ್ಕೆ ಒಗೆಯುವನು) ಭಾವಚಿತ್ರದ ಗೂಡ ಅದೋ ಅವಳನ್ನೂ ಕರೆದುಕೊಂಡು ಹೋಗಿರಿ.

ರಾಗ ಛಾಯಾನಾಟ ತಾಳ ತ್ರಿವಟ

**ತೋರದೇ ಕೃಷ್ಣಮುಖವ। ದುರುಳೆನೀ ಪೋಗು ಕುಟಿಲೇ ॥ ಘೋರವಾದ ವಿಷ ಭರಿತ ನಾಗಿಣಿ ॥ ನಾರಿಯಲ್ಲವೆ ಸತ್ಯವಿದೂ ॥**

**ಪೂರ್ಣಿಮಾ**—ನಾನಾದರೂ ನಿಮ್ಮ ಮನೆಯಲ್ಲಿದ್ದು ಮಾಡುವದೇನು? ಅಣ್ಣ ನಿದ್ದಾನೆ- ಸಂರಕ್ಷಿಸುತ್ತಾನೆ - ನನ್ನನ್ನು!

**ವಿಜಯ**—ಇಂದಿನ ಸಂಗತಿಯನ್ನು ಅವನಿಗೇ ಕಾಗದ ಬರೆದು ತಿಳಿಸುತ್ತೇನೆ; ಅಂದರೆ ಅವನು ನಿನ್ನನ್ನು ಹೇಗೆ ಸಂರಕ್ಷಿಸುತ್ತಾನೋ ನೋಡುವೆನು! ಈಗ ಅದಕ್ಕೇ ಹೊರಟೆ - ನಾನು - !

**ಪೂರ್ಣಿಮಾ**—ನೀವು ಬರೆಯಿರಿ - ಮತ್ತು - ನಾನೂ ಬರೆಯುತ್ತೇನೆ. ಈ ಪತಿಗಳೆಂದರೆ - ಬೆನ್ನುಹತ್ತಿದ ಬ್ರಹ್ಮರಾಕ್ಷಸರೇ ಸರಿ! (ಇಬ್ಬರೂ ಹೋಗುವರು)

**ಆನಂದ**—(ಸ್ವ) ಸರಿ. ಇವನು ವೃದ್ಧರಾಕ್ಷಸ, - ಇವಳು ಹೆಣ್ಣುಪಿಶಾಚಿ, ಅಂತೂ ಜೋಡು ಸರಿಯಾಗಿ ಕಳೆತಿದೆ. ಮತ್ತು ನಾನೋ ಶತತಾರೆಗೆ ಗಂಟುಬಿದ್ದ ಗಂಡು ಪಿಶಾಚಿ! ಅಂತೂ ಒಮ್ಮೆ ಈ ಪಶ್ಚಾತ್ತಾಪದ ಅಗ್ನಿಯಲ್ಲಿ ಬೆಂದು, ಈ ಭಾವಚಿತ್ರದ ದರ್ಶನ ತಕ್ಕೊಳ್ಳುವೆನು-ಮತ್ತು ಇವನ್ನೇ ಶತತಾರೆಗೆ ನಾನು ಕಾಣಿಕೆ ಕೊಡುವೆನು! ಆಮೇಲೆ ನನ್ನ ಪ್ರಾರಬ್ಧ! ಅವಳ ಇಚ್ಛೆ!

ರಾಗ ಆನಂದ ಭೈರವಿ ತಾಳ

ನಾ ಪೋಗಿ ಶತತಾರೆಯಾ । ಕೋಪವ ನೆರೆ ತೊಲಗಿಸಿ ನಗಿಸಿ ಸುಖಿಸಿ ಸಂತೋಷಿಸೆ ॥ ಪಲ್ಲ ॥ ಮನವ ನಾನೊಲಿಸಿ ಸತಿಯಾ ವಿನಯದಿ ಬೇಡಿ ಕ್ಷಮೆಯಾ ॥ ಪ್ರಣಯವ ತೋರಿ ಕೃಪೆಯಾ । ಜನಿಸುವತೆರ ಮನ್ನಿಸಿ ನುಡಿಸಿ ಆಲಿಂಗಿಸೇ ॥ ೧ ॥

ನಾಲ್ಕನೇ ಅಂಕ ಸಂಪೂರ್ಣ.

---

# ಐದನೇ ಅಂಕ

## ೧ನೇ ಪ್ರವೇಶ

( ಶತತಾರೆಯ ಮನೆ—ಶತತಾರೆ ಮತ್ತು ಮೃಗಶಿರೆ )

**ಶತತಾರಾ**—ಈ ದುಷ್ಟ ದಾಕ್ಷಿಣ್ಯವೇ ಮನುಷ್ಯರನ್ನು ಬಾಧಿಸುವದು! ದುರ್ಜನರಿಗೆ ದೂರದಿಂದ ನಮಸ್ಕಾರ; ಇದೇ ವಿಹಿತವು. ಅಲ್ಲೇನೆ - ಮೃಗಶಿರೇ ನೋಡಿದೆಯಾ ಆನಂದಶೇಟರು ಹೇಗೆ ಮೋಸಮಾಡಿದರು! ವಚನ

ಕೊಟ್ಟು - ಪ್ರಮಾಣಮಾಡಿ, ಪ್ರತ್ಯಕ್ಷ ರಮಾಕಾಂತನೆದುರು ಕೈಹಿಡಿದ ಇವರು, ನನ್ನನ್ನು ಈ ರೀತಿ ಮೋಸಗೊಳಿಸಬೇಕೆ? ನೀನು ಈಗಿಂದೀಗಲೇ ಹೋಗು - ಅವರ ಕಡೆಗೆ! ಹೇಳು ಅವರಿಗೆ, ಇಂದಿಗೆ ನಮ್ಮ ನಿಮ್ಮ ಸಂಬಂಧ ಕಡಿಯಿತು, ನನ್ನ ಮನೆಗೆ ಬಂದರೆ ನಾನು ಭೇಟಿಯಾಗುವದಿಲ್ಲ, ನೀವು ಕಾಗದ ಬರೆದರೆ ಅದಕ್ಕೆ ಉತ್ತರ ಬರೆಯುವದಿಲ್ಲ, ನಿಮ್ಮ ಸೇವಕರಾರಾದರೂ ಬಂದರೆ ಅವರ ಕೂಡ ಸಹ ಮಾತಾಡುವದಿಲ್ಲವೆಂದು, ಸ್ಪಷ್ಟವಾಗಿ ಹೇಳಿಬಿಡು. ತಿಳಿಯಿತೇ—?

**ಮೃಗಶಿರೆ**—ತಿಳಿಯಿತು. ಆದರೆ ಹೀಗೆ ಹೇಳಿದರೆ ಅವರಿಗೆ ಕೆಡಕೆನಿಸುವದಿಲ್ಲವೇ ?

**ಶತತಾರಾ**—ಅದೇನೆ ಇರಲಿ! ಅವರಿಗೆ ಹೀಗೇ ಸ್ಪಷ್ಟವಾಗಿ ಹೇಳು!

**ಮೃಗಶಿರೆ**—ಆದರೆ ನಾನು ಅನ್ನುವದೇನಂದರೇ—

**ಶತತಾರಾ**—ಈಗ ನೀನು ಯಾವ ಮಾತೂ ಆಡಬೇಡ! ಅವರ ಸೊಕ್ಕನ್ನು ಹೀಗೇ ಮುರಿಯಬೇಕು!

**ಮೃಗಶಿರೆ**—ಅದೋ - ದೇವಿಯವರೇ - ಅವರೇ ಬಂದರು. ಇನ್ನುಮೇಲೆ—

**ಶತತಾರಾ**—ಬರಲಿ. ನಾನು ಮಹಡಿಯ ಮೇಲೆ ಹೋಗುವೆನು. ನೀನು ಅವರಿಗೆ - ನಾನು ಆಗಲೇ ನಿನಗೆ ಹೇಳಿದಂತೆ ಸ್ಪಷ್ಟವಾಗಿ ಹೇಳಿಬಿಡು! (ಹೋಗ ಹೋಗುತ್ತಾ) ಅವರು ಹೋದಮೇಲೆ ನಾನು ಬರುವೆನು. (ಹೋಗುವಳು - ಆನಂದಶೇಟರು ಬರುವರು)

**ಆನಂದಶೇಟ**—ಮೃಗಶಿರೆ - ಶತತಾರೆಯು ಒಳಗಿರುವಳೇ—?

**ಮೃಗಶಿರೆ**—ಹೌದು ಒಳಗಿರುವರು. ಆದರೆ ಅವರು ತಮಗೆ ಭೇಟಿಯಾಗುವದಿಲ್ಲವೆಂದು ನಿಷ್ಠುರವಾಗಿ ಹೇಳುವದಕ್ಕೆ ನನಗೆ ಹೇಳಿರುವರು.

**ಆನಂದಶೇಟ**—ಹೀಗೆ ಹೇಳುವದಕ್ಕೆ ಕಾರಣವೇನು ?

**ಮೃಗಶಿರೆ**—ಏನು ಕಾರಣವೋ - ಅದನ್ನು ನಾನೇನು ಬಲ್ಲೆ? ನಿನ್ನೆ ಸಾಯಂಕಾಲ ವಿಜಯರಾಯರು ಬಂದಿದ್ದರು. ಅವರೇ ಏನಾದರೂ ಇಲ್ಲದ್ದೊಂದು ಹೇಳಿರಬಹುದು.

**ಆನಂದಶೇಟ**—ಏನಂದೇ - ವಿಜಯರಾಯರು ಬಂದಿದ್ದರೆ—, ಹಾಗಾದರೆ

ಅದೇ ವಿಷಯವನ್ನೇ ಸ್ವಚ್ಛಮಾಡಲು, ನಾನು ಈಗ ಬಂದದ್ದು; ಮತ್ತು ಅದಕ್ಕಾಗಿಯೇ ನಾನು ಶತತಾರೆಯನ್ನು ಕಾಣಬೇಕಾಗಿದೆ.

**ಮೃಗಶಿರೆ**—ಛೆ - ಛೆ - ಅದು ಸಾಧ್ಯವಿಲ್ಲ. ಅವರು ನಿಮ್ಮ ಕೂಡ ಮಾತಾಡುವದಿಲ್ಲ; ಪತ್ರ ಬರೆದರೆ ಅವರ ಕಡೆಗೆ ನೋಡುವದಿಲ್ಲ! ಹೀಗೆ ಅವರು ಸಂಪೂರ್ಣ ನಿಶ್ಚಯಮಾಡಿದ್ದಾರೆ; ಅಂದಮೇಲೆ ನೀವು ಭೇಟಿಯಾಗಿ ಮಾತಾಡುವದನ್ನು ಮನಸ್ಸಿನಲ್ಲಿ ಕೂಡ ತರಬೇಡಿರಿ! ಈ ಸಮಯದಲ್ಲಿ ಅವರಿಗೆ ಭೇಟಿಯಾಗುವದಕ್ಕಿಂತ ವಿಜಯರಾಯರನ್ನೇ ಭೇಟಿಯಾಗಿರಿ; ಅಂದರೆ ನಿಮಗೆ ಹೆಚ್ಚು ಉಪಯೋಗವಾದೀತು!

**ಆನಂದಶೇಟ**—ಹೌದು ನಿನ್ನ ಅಭಿಪ್ರಾಯವು ಯೋಗ್ಯವು. ನಾನು ಈಗ ಅತ್ತಕಡೆಗೇ ಹೋಗುವೆನು. ಆದರೆ ನೀನು ನನ್ನದೊಂದು ಕೆಲಸ ಮಾಡುವಿಯಾ? ನಾನು ವಿಜಯರಾಯರ ಹತ್ತಿರ ಹೋಗಿ ಬರುವದರೊಳಗಾಗಿ - ನೀನು ನನಗಾಗಿ ಶತತಾರೆಯ ಮನಸ್ಸನ್ನು ಒಲಿಸುವ ಯತ್ನಮಾಡುವಿಯಾ? ನಾನು ಬಂದು, ಶತತಾರೆಯ ತಲೆಯಲ್ಲಿ ನನ್ನ ವಿಷಯವಾಗಿ ಸೇರಿದ ಸಂಶಯವನ್ನು ಕಳೆಯುತ್ತೇನೆ! ಆದರೆ ಮೃಗಶಿರೆ - ಶತತಾರೆಯು ಹೀಗೆ ಮಾಡುವಳೆಂದು ನಾನು ತಿಳಿದಿರಲಿಲ್ಲ.

**ಮೃಗಶಿರೆ**—ಅಂತೆಯೇ ನಾನು ಹೇಳಿದಂತೆ ನೀವು ಮಾಡಿರಿ. ನೀವು ವಿಜಯರಾಯರನ್ನು ಭೇಟಿಯಾಗಿ ಬನ್ನಿರಿ. ನಾನು ತಾವು ಹೇಳಿದಂತೆ ಅವರ ಮನಸ್ಸು ಒಲಿಸುವದಕ್ಕೆ ಯತ್ನಮಾಡುತ್ತೇನೆ.

**ಆನಂದಶೇಟ**—ಒಳ್ಳೇದು! ಮತ್ತು ಅವಳಿಗೆ ಹೀಗೆ ಹೇಳು. ನನಗೆ ನಿನ್ನ ವಿಷಯವಾಗಿ ಹುಟ್ಟಿದ ಸಂಶಯ ದೂರವಾಯಿತು. ನಿನ್ನ ಮೇಲೆ ವೃಥಾ ದೋಷಾರೋಪ ಹೊರಿಸಿದ್ದಕ್ಕಾಗಿ, ನನ್ನ ಮನಸ್ಸಿನಲ್ಲಿ ಪಶ್ಚಾತ್ತಾಪವುಂಟಾಗಿದೆಯೆಂದು ನಾನೇ ನಿನ್ನ ಕ್ಷಮೆ ಬೇಡುವದಕ್ಕೆ ಬಂದಿದ್ದೆನು! ಇನ್ನು ನಾನು ಬರಲೇ?

**ಮೃಗಶಿರೆ**—ನೀವು ಹೋಗಿರಿ, ಮುಂದಿನ ಕಾರ್ಯ ನನ್ನನ್ನು ಕೂಡಿದೆ. (ಆನಂದಶೇಟ - ಹೋಗುವೆನು) ಇವರ ಮಾತಿನಲ್ಲಿ ಕಪಟವೇನೂ ಕಾಣುವದಿಲ್ಲ. ಎಷ್ಟು ಸರಳಹೃದಯ. (ಶತತಾರೆಯು ಬರುವಳು)

**ಶತತಾರಾ**—ಏನೇ - ಅವರು ಏನು ಹೇಳಿದರು ?

**ಮೃಗಶಿರೆ**—ಅವರು ಇಲ್ಲಿಂದ ಬಹಳ ದುಃಖಿತರಾಗಿಯೇ ಹೋದರು; ಮತ್ತು ಹೋಗುವಾಗ ತಮ್ಮೊಡನೆ ಸಂಧಾನ ನಡೆಸಲು ನನಗೆ ಹೇಳಿದರು. ನಿಮ್ಮ ಬಗ್ಗೆ ಅವರಲ್ಲಿ ಹುಟ್ಟಿದ ಸಂಶಯ ದೂರವಾಗಿದೆಯಂತೆ-, ಮತ್ತು ಮೊದಲಿನ ತಪ್ಪಿಗಾಗಿ ಅವರಿಗೆ ಬಹಳ ಪಶ್ಚಾತ್ತಾಪವಾಗಿದೆಯಂತೆ !! ನೀವು ಅವರನ್ನು ಭೇಟಿಯಾಗುವದಿಲ್ಲವೆಂಬುದನ್ನು ಕೇಳಿ, ಅವರು ಇಳಿದೇ ಹೋದರು. ಹೋಗುವಾಗ ದುಃಖದ - ಭಾರದಿಂದ ಭಾರವಾದ ಅವರ ಮುಖವನ್ನು ನೋಡಿ, ನನಗೆ ಬಹಳ ಕಳವಳವಾಯಿತು. ಹೋಗುವಾಗ ತಮ್ಮ ಮನವಲಿಸಲು ನನಗೆ ಹೇಳಿದರು.

**ಶತತಾರಾ**—ಅವರ ವಿಷಯವಾಗಿ ನೀನು ಹೀಗೆ ಹೇಳುವಿ ! ವಿಜಯರಾಯರು ಹಾಗೆ ಹೇಳುವರು !! ಅಂದಮೇಲೆ ನಾನು ಯಾವ ದಾರಿ ಹಿಡಿಯಲಿ ?

**ಮೃಗಶಿರೆ**—ನಾನು ಹೇಳುವದೇನೆಂದರೇ – ನೀವು ಬರಿಯ ಹೇಳಿಕೆಯ ಮಾತನ್ನು ನಂಬದೆ, ವಿಜಯರಾಯರ ಹೆಂಡತಿಯನ್ನೇ ವಿಚಾರಿಸಿರಿ ; ಅಂದರೆ ಎಲ್ಲ ಸಂಶಯ ದೂರಾದೀತು ! ಅದೂ ಅಲ್ಲದೇ, ಆನಂದ ಶೇಟರೂ ಅತ್ತಕಡೆಗೇ – ಹೋಗುವವರಿದ್ದರು. ನೀವು ಈಗ ಅಲ್ಲಿಗೇ ಹೋದರೆ, ಅಲ್ಲಿ ನಡೆಯುವ ಸರ್ವವಿಷಯವೂ, ನಿಮಗೆ ಸ್ಪಷ್ಟವಾಗಿ ತಿಳಿದೀತು ! ಹೀಗೆ ಮಾಡಿದರೆ ಸಂಶಯವೇ ಉಳಿಯುವದಿಲ್ಲ.

**ಶತತಾರಾ**—ಈ ನಿನ್ನ ಹಂಚಿಕೆಯೇ ನನಗೆ ಸರಿತೋರುವದು. ಒಳಗೆ ಹೋಗಿ ನಾನು ಹೊದ್ದುಕೊಳ್ಳುವ ಚಾದರವನ್ನು ಇಲ್ಲಿ ತಾ – (ಮೃಗಶಿರೆ ಹೋಗುವಳು) ನಾನು ಈಗಲೇ ಹೋಗಿ ಪೂರ್ಣಿಮಾದೇವಿಯನ್ನು ಕಾಣುತ್ತೇನೆ. ಬರೀ ಸಂಶಯದಿಂದ ಆನಂದಶೇಟರನ್ನು ಕಳೆದು ಕೊಂಡರೆ, ಇಡೀ ಜನ್ಮ ತಳಮಳಿಸಬೇಕಾದೀತು ! (ಮೃಗಶಿರೆ ಬರುವಳು) ತಾ ಇಲ್ಲಿ ಅಮ್ಮ - ನನ್ನನ್ನು ಕೇಳಿದರೆ, ವಿಜಯರಾಯರ ಮನೆಗೆ ಹೋಗಿರುವೆನೆಂದು ಹೇಳು.

ರಾಗ ಭೈರವಿ ತಾಳ ಕೇರವಾ

**ಪತಿನಿಜಮತಿಯಾ । ಪೋಗಿ ಶೋಧಿಸೆ ॥ ಪಲ್ಲ ॥ ಮೋಹಚಿತ್ರಚರಿತಾ । ಬಹುಚಿತ್ತ**

ಶಾಂತಾ ॥ ಮಹಾಸಾಹಸಗೈದು । ಶೋಧಿಪೆ ॥ ೧ ॥ ಚಿತ್ತ ವೈಕಲ್ಯಚಪಲಾ । ಕಿತ್ತುವೇ ಸರ್ವಮೂಲಾ ॥ ಸತ್ಯಸನ್ಮಾರ್ಗಶೀಲಾ ॥ ಬಿತ್ತುವೇ ಭೂಮಿ ತಲದೇ ॥ ೨ ॥

## ಎರಡನೇ ಪ್ರವೇಶ

(ಶತತಾರೆಯ ಮನೆ)

(ಧನಿಷ್ಟಾಸಾನಿ ಮತ್ತು ಮೃಗಶಿರೆ ಬರುವರು)

**ಧನಿಷ್ಟಾ**—ಮೃಗಶಿರೇ–ಶತತಾರೆಯು ಎಲ್ಲಿಗೆ ಹೋದಳು? ಮೊನ್ನಿನಿಂದಲೂ ಈ ಹುಡುಗೆಯು, ಮನಸ್ಸಿಗೆ ಸಮಾಧಾನವಿಲ್ಲದೇ - ಒದ್ದಾಡುತ್ತಿರುವಳು.

**ಮೃಗಶಿರೆ**—ಹೌದು ಈವರೆಗೂ ಅವರಿಗೆ ಸಮಾಧಾನವೇ ಇರಲಿಲ್ಲ. ಈಗ ಸ್ವಲ್ಪ ಸಮಾಧಾನಕ್ಕೆ ಬಂದಿದ್ದಾರೆ. ಈಗ ಅವರು ಹೋದದ್ದು ಅದೇ ಕೆಲಸಕ್ಕೆಂದೇ—!

**ಧನಿಷ್ಟಾ**—ನಾನಿರುವಾಗ ಇವಳು ಇಷ್ಟೇಕೆ ಆತುರಳಾಗಬೇಕು? ಹೀಗೇಕೆ ತಲೆ ಕೆಡಿಸಿಕೊಳ್ಳಬೇಕು? ಆನಂದಶೇಟರು-ಆನಂದಶೇಟರು-ಎನ್ನುತ್ತ ಅದೆಷ್ಟು ಕುಣಿದಳು-, ಈ ತಿಂಗಳೆಲ್ಲ! ಏನೋ ಹುಡುಗಿಯೆಂದು, ನಾನು ಈವರೆಗೂ ಸುಮ್ಮನಿದ್ದೆ–, ಮೊನ್ನೆ ಕೇಳಿದೆ, ಅವರ ಕೂಡ ಇವಳೇನೋ ತಂಟೆಮಾಡಿದ್ದಾಳಂತೆ—?

**ಮೃಗಶಿರೆ**—ತಂಟೆಯಿಲ್ಲ - ತಗಾದೆಯಿಲ್ಲ! ಇದೊಂದು ಪ್ರೇಮಕಲಹದ ಮಾದರಿ ಅಷ್ಟೇ—!

**ಧನಿಷ್ಟಾ**—ಹಾಗಿದ್ದರೆ - ನಿನ್ನೆ ಆ ವಿಜಯರಾಯರು ಇವಳ ಹತ್ತಿರ ಬಂದದ್ದು ಏತಕ್ಕಾಗಿ!

**ಮೃಗಶಿರೆ**—ಅದು ನನಗೆ ತಿಳಿಯದು. ಈಗ ಮಾತ್ರ ವಿಜಯರಾಯರನ್ನು ಕಾಣಲು ಹೋಗುತ್ತೇನೆಂದು ಹೇಳಿ ಹೋದರು.

**ಧನಿಷ್ಟಾ**—ಅವರ ಮನೆಗೇ ಹೋದಳೇ? ಹೋಗು - ಗಾಡಿ ಹೂಡಿಕೊಂಡು ಬರಲು ಹೇಳು. ಇಂಥ ಹುಚ್ಚುಚಾಳಿ ನನ್ನ ಮನಸ್ಸಿಗೆ ಬರುವದಿಲ್ಲ.

**ಮೃಗಶಿರೆ**—ಅಮ್ಮಾ, - ಅವರೇ ಈಗ ಬಂದಾರು!

**ಧನಿಷ್ಠಾ**—ಈಗ ಮೊದಲು ನೀನು, ಗಾಡಿ ತರಲಿಕ್ಕೆ ಹೇಳಲು – **ಹೋಗು !** ನಾನು ಸ್ವಲ್ಪ ಒಳಗೆ ಹೋಗಿ ಬರುವೆನು.

## ಮೂರನೇ ಪ್ರವೇಶ

(ವಿಜಯರಾಯರ ಮನೆ – ವೃಶ್ಚಿಕನು ಬರುವನು)

**ವೃಶ್ಚಿಕ**—ನಿನ್ನೆಯಿಂದ ಒಂದು ಕ್ಷಣ ಸಹ ವಿಶ್ರಾಂತಿ ಇಲ್ಲ ! ಅಲ್ಲಿ ಹೋಗು ಇಲ್ಲಿ ಬಾ - ಈ ಪತ್ರವನ್ನು ಕೊಡು, ಆ ಸಮಾಚಾರ ತಿಳಿಸು, ಸತ್ಯ ಮಾತಾಡು, ಸುಳ್ಳು ನುಡಿಯಬೇಡ, ಹೀಗೆ ಒಂದೇ ಸಮನೇ ಗಲಾಟೆ ನಡೆದುಹೋಗಿದೆ. ನಾನೂ ಎಷ್ಟೋ ಕಡೆಗೆ ದುಡಿದೆ, ಆದರೆ ಈ ಪ್ರಕಾರವೇ ಬೇರೆ. ಓಹೋ ಮತ್ತೆ ಯಾರು ಬಂದರು ? ಇವರು - ನಮ್ಮ ಧಣಿಯರು. ತೀರಿತು - ಖಂಡಿತವಾಗಿ ನನ್ನ ನೂರು ವರುಷ ತೀರಿದವು. ಒಳಗೆ ಕೊಠಡಿಯಲ್ಲಿ ಯಜಮಾನರು ಮತ್ತು ಶತತಾರೆಯವರು ಗುಟ್ಟಾಗಿ ಮಾತಾಡುತ್ತಿರುವರು ; ಅದು ಇವರಿಗೆ ತಿಳಿದರೆ ಸಿಡಿಲಿನ ಅರ್ಭಾಟವೇ ಪ್ರಾರಂಭವಾದೀತು ! ಅಯ್ಯೋ ಅವರು ಇತ್ತಕಡೆಗೇ ಬಂದರಲ್ಲಾ – ಏನು ಮಾಡಲಿ ?

**ವಿಜಯ**—(ಬಾಗಿಲಿನಿಂದ ಇಣಿಕಿಹಾಕಿ) ವೃಶ್ಚಿಕಾ - ಬಂದವರು ಯಾರು ? ಅವಳೇ—?

**ವೃಶ್ಚಿಕ**—ಹೌದು ಧಣಿಯರೇ—

**ವಿಜಯ**—ಶತತಾರೆಯು ಒಳಗಿರುವಳೆಂದು ಅವಳಿಗೆ ಹೇಳಬೇಡ ! — ತಿಳಿಯಿತೆ ?

**ವೃಶ್ಚಿಕ**—ಅವರು ಕೇಳಿದರೆ ಹಾಗೇ ಹೇಳುತ್ತೇನೆ. ಕೇಳದೇ ಹಾಗೇ ನುಗ್ಗಿದರೆ ? ಆದೋ ಅವರೇ ಬಂದರು. ಬಾಗಿಲನ್ನು ಹಾಕಿಕೊಳ್ಳಿರಿ !

(ವಿಜಯರಾಯರು ಹಾಗೆ ಮಾಡುತ್ತಾರೆ)

ಅಮ್ಮನವರು ಒಳ್ಳೆ ರಭಸದಿಂದ ಬರುತ್ತಿದ್ದಾರೆ. ಎಲ್ಲಿಗೆ ಹೋಗಿದ್ದರೋ !

**ಪೂರ್ಣಿಮಾ**—ವೃಶ್ಚಿಕಾ - ಇವರು - ಒಳಗೆ ಇದ್ದಾರೇನೋ ?

**ವೃಶ್ಚಿಕ**—ಇದ್ದಂತೆ ಕಾಣುವದು – ಅಮ್ಮನವರೇ—

**ಪೂರ್ಣಿಮಾ**—ಒಬ್ಬರೇ ಇರುವರೋ, ಅಥವಾ ಮತ್ತಾರಾದರೂ ಹತ್ತಿರ ಇರುವರೋ ?

**ವೃಶ್ಚಿಕ**—ಛೇ! ಯಾರೂ ಇಲ್ಲ. ರಾಯರೇ ಕಾಗದ ಬರೆಯುತ್ತ ಕುಳಿತಿದ್ದಾರೆ; ಮತ್ತು ಯಾರನ್ನೂ ಒಳಗೆ ಬಿಡಬೇಡವೆಂದು ಹೇಳಿದ್ದಾರೆ.

**ಪೂರ್ಣಿಮಾ**—ನನಗೆಲ್ಲಿ ಬೇಕಾಗಿದೆ – ಒಳಗೆ ಹೋಗುವದು! ಅವರೇ ಏಕಾಂತದಲ್ಲಿ ಸುಖವಾಗಿ ಕೂಡಲಿ!

**ವೃಶ್ಚಿಕ**—(ಸ್ವ) ಆ! ಇದು ಹೇಗೆ ಇವರಿಗೆ ತಿಳಿಯಿತು? (ಪ್ರ) ಎಲ್ಲಿಯ ಏಕಾಂತ - ಅಮ್ಮನವರೇ - ಏನೋ ಓದುತ್ತ ಬರೆಯುತ್ತ ಕುಳಿತಿರುವರು ಅಷ್ಟೇ—

**ಪೂರ್ಣಿಮಾ**—ಇಷ್ಟರಲ್ಲಿಯೇ ಅದೆಷ್ಟೋ ಸುಳ್ಳು ಮಾತಾಡುವದು! ಇನ್ನು ಮೇಲೆ ನೀನು ಸತ್ಯ ಮಾತಾಡು – ಇಲ್ಲವೇ ಅಸತ್ಯವನ್ನೇ ಮಾತಾಡು, ಅವರ ಗೊಡವೆ ನನಗೇಕೆ ಬೇಕು? ನಾನೇ ಈ ಮನೆಯನ್ನು ಬಿಡಬೇಕೆನ್ನುತ್ತೇನೆ, ಅಂದರೆ ಈ ಸಂಬಂಧವೇ ಅವರಿಗೇ ತಪ್ಪೀತು! ನಾನು ಹೋದೆನೆಂದು, ಅವರಿಗೆ ಹೇಳು; ಮತ್ತು ಅವರ ಏಕಾಂತವು ಇನ್ನು ಮುಂದೆ ಅವಿಚ್ಛಿನ್ನವಾಗಿ ಸಾಗಲಿ! ಸುಮ್ಮನೇ ನನ್ನಿಂದ ಅವರಿಗೆ ತೊಂದರೆಯೋ ಬೇಡ! (ಹೋಗುವಳು)

(ಶತತಾರೆ ಮತ್ತು ವಿಜಯರು ಹೊರಗೆ ಬರುತ್ತಾರೆ)

**ಶತತಾರಾ**—ನನಗೆ ಪೂರ್ಣಿಮಾದೇವಿಯವರ ಕೂಡ ಒಂದೇ ಒಂದು ಶಬ್ದ ಮಾತಾಡುವದಿದೆ.

**ವಿಜಯ**—ಆದರೆ, ಇದೋ ದಯಮಾಡಿ ಈ ಸಮಯದಲ್ಲಿ ಅದು ಬೇಡ.

**ಶತತಾರಾ**—ಒಂದೆರಡು ಪ್ರಶ್ನೆಗಳಲ್ಲಿಯೋ ನನ್ನ ಸಂಶಯ ದೂರಾದೀತು, ಅದಕ್ಕೆ ತಾವೇಕೆ ಬೇಡವೆನ್ನುವಿರಿ?

**ವಿಜಯ**—ಏಕೆಂದು ವಿಚಾರಿಸಬೇಡ. ಅದಕ್ಕೆ ಸಾವಿರ ಕಾರಣಗಳಿವೆ. ನೀನು ಈ ಮನೆಯಲ್ಲಿ ಇರುವದನ್ನು ಅವಳು ನೋಡಿದರೆ, ಅನರ್ಥವೇ ಉರಿದದ್ದೀತು! ಅದು ನಿನ್ನ ಲಕ್ಷ್ಯಕ್ಕೆ ಹೇಗೆ ಬಂದೀತು! ನೂರಾರು ದುರ್ವಿಚಾರಗಳನ್ನೇ ಅವಳು ಕಲ್ಪಿಸುವಳು. ನೀನು ಇಲ್ಲಿ ಇರುವವರೆಗೆ

ನನ್ನ ಜೀವದಲ್ಲಿ ಜೀವವಿಲ್ಲ; ಅದೂ ಅಲ್ಲದೇ - ನಿನ್ನದಾದರೂ ಇಷ್ಟೇಕೆ ಹಟ?

**ಶತತಾರಾ**—ಆನಂದಶೇಟರ ಮೇಲಿನ ಅಪವಾದವು, ಸತ್ಯವೋ - ಮಿಥ್ಯವೋ - ಅದನ್ನು ನಾನು ವಿಚಾರಿಸಲೇ ಬೇಕು! ಮತ್ತಾವುದೂ ಬೇರೆ ಕಾರಣ ವಿಲ್ಲ.

**ವಿಜಯ**—ಅದನ್ನು ಪರಿಹಾರಮಾಡುವದಕ್ಕೆ ಅವಳೇ ಏಕೆ ಬೇಕು? ನಾನು ಮಾಡುತ್ತೇನೆ. ಏನೇ ಅದಕ್ಕೆ ಬೇಕಾದಷ್ಟು ಸಾಕ್ಷಿಗಳಿವೆ. ನಾನು ನಿನಗೆ ಭೆಟ್ಟಿಯಾದನಂತರ ನನ್ನ ಮನೆಯಲ್ಲಿ ಅವನು, ಅವಳು ಮಲಗುವ ಕೋಣೆಯಲ್ಲಿ ಅಡಗಿಕೊಂಡು ಕುಳಿತದ್ದನ್ನು, ನಾನೇ ಸ್ವಂತವಾಗಿ ನೋಡಿದ್ದೇನೆ.

**ಶತತಾರಾ**—ಏನು ಹೇಳುವಿರಿ? ಅವರ ಕೋಣೆಯಲ್ಲಿಯೇ?

**ವಿಜಯ**—ಹೌದು—ಹೌದು—ಖಂಡಿತವಾಗಿ ಅವಳ ಕೋಣೆಯಲ್ಲಿ! ಮತ್ತೇನು ಹೇಳು.

**ಶತತಾರಾ**—ಇನ್ನೇನು ಹೇಳುವದು ನಾನು! ನನ್ನ ಪ್ರಾರಬ್ಧ! ಅಲ್ಲಾ - ನೀವು ಇದನ್ನು ಸತ್ಯವಾಗಿ ಹೇಳುವಿರಾ?

**ವಿಜಯ**—ಇನ್ನೆಂಥ ಸತ್ಯ ಹೇಳಲಿ ನಾನು. ಇದೊ ಇವು ನನ್ನ ಕಣ್ಣು – ಮತ್ತು ಇದೋ ಈ ನಾನು! ಪ್ರತ್ಯಕ್ಷವಾಗಿ-ನಾನು ಅವನನ್ನು ನೋಡಿದೆ, ಅವನ ಕೂಡ ಮಾತಾಡಿದೆ, ಮೋರೆಯ ಮೇಲಿನನೀರು, - ಇಳಿಸಿ ಕೊಟ್ಟೆ! ಈಗಾದರೂ ನಿನಗೆ ಸ್ಪಷ್ಟವಾಯಿತೇ? ಅವಳ ದಾಸಿ - ಅಂದರೆ ಪ್ರತಿಪದೆಯು, ಅವನನ್ನು ಕೋಣೆಯಲ್ಲಿ ಅಡಗಿಸಿ ಕೂಡ್ರಿಸಿದ್ದಳು. ಇದಕ್ಕೂ ಹೆಚ್ಚಿನ ಸಾಕ್ಷಿ ಮತ್ತಾವುದು?

**ಶತತಾರಾ**—ಇದ್ದಷ್ಟೂ ನನಗೆ ಬೇಕು.

**ವಿಜಯ**—ಆದರೇ—ಈಗ ಇಷ್ಟೇ ಸಾಕು. ಮತ್ತೊಮ್ಮೆ ಹೇಳುವೆನು. ಈಗ ನಿನ್ನನ್ನು ಮನೆಯವರೆಗೆ ತಲುಪಿಸಲು ವೃಶ್ಚಿಕನು ಬರುವನು. ಅವನ ಜೊತೆಗೆ ನೀನು ಹೋಗು. ಒಂದುವೇಳೆ ಅವಳು, ನಮ್ಮಿಬ್ಬರನ್ನು ಒಂದೇ ಸ್ಥಳದಲ್ಲಿ ಕಂಡರೇ - (ಕೇಳಿ) ಅದೋ ಅವಳೇ - ಅವಳೇ ಬಂದಳು. ನೀನು ಹೋಗು. ಆದರೆ ಈ ವೃಶ್ಚಿಕನು ಎಲ್ಲಿರುವನು?

**ಶತತಾರಾ**—(ಉಸುರ್ಗರೆದು) ಇದ್ದ ಚೂರುಚಾರು ಆಶೆಯು - ಹೋಗಿ, ನಿರಾಶವಾಯಿತು !

**ಧನಿಷ್ಠಾ**—(ಪಡದೆಯಲ್ಲಿ) ಯಾರೋ ಅದು - ಒಳಗೆ-, ನಮ್ಮ ಹುಡುಗೀ - ಶತತಾರಾ ಇರುವಳೇನೋ—

**ಶತತಾರಾ**—ಅಮ್ಮಯ್ಯಾ - ಇದು ನಮ್ಮಮ್ಮನ ಧ್ವನೀ - ಇಲ್ಲಿಗೇಕೆ ಬಂದಳು? ಇಲ್ಲಿ ನಾನಿಲ್ಲವೆಂದು ಅವಳಿಗೆ ಹೇಳಿರಿ; ಮತ್ತು ನನ್ನನ್ನು ಎಲ್ಲಿಯಾದರೂ ಅಡಗಿಸಿರಿ. ಆ ಕೋಣೆಯಲ್ಲಿ ಅಡಗಲೇ—?

**ವಿಜಯ**—ಬಹಳ ಒಳ್ಳೆಯ ಕೆಲಸ. ಕಳ್ಳನು ಓಡಿಹೋಗಿ ಪೋಲೀಸ್ ಸ್ಟೇಷನದಲ್ಲಿ ಅಡಗಿದಂತೆಯೇ ಸರಿ ಇದು. ಅದೋ ನಿನ್ನ ತಾಯಿಯೂ ಅದೇ ಕೋಣೆಯ ಕಡೆಗೇ ಹೊರಟಿದ್ದಾಳೆ.

**ಶತತಾರಾ**—ಹಾಗಾದರೆ ಉಪ್ಪರಿಗೆಯಮೇಲೆ ಹೋಗಲೇ,—ಹೇಳಿರಿ ಬೇಗನೆ—

**ವಿಜಯ**—ಅದಕ್ಕೂ ಇದು ಮೇಲು ! ಅಂದರೆ - ಅನಾಯಾಸವಾಗಿ ನೀನು ನನ್ನ ಹೆಂಡತಿಯ ಕೈಗೇ ಸಿಕ್ಕುಬೀಳುವಿ ! (ಕೇಳಿ) ಅದೋ ಸಪ್ಪಳ ಕೇಳಬಂತು. ಘಾತವಾಯಿತು. ಬಂದೇ ಬಂದಳು. ಹೂ - ಆ ಪೆಟ್ಟಿಗೆಯ ಮರೆಯಾಗಿ ಕುಳಿತುಕೋ.

**ಶತತಾರಾ**—ಗಾಬರಿಯಿಂದ ನನ್ನ ಅವಸ್ಥೆಯೇ ಮುಗಿದುಹೋಗಿದೆ. ಕೈಕಾಲುಗಳು ಬಿದ್ದುಹೋಗಿ, ನಾನು ಒಂದು ಹೆಜ್ಜೆ ನಡೆಯುವಂತಿಲ್ಲ. ನೀವೇ ಎಲ್ಲಿ ಬೇಕೋ ಅಲ್ಲಿ ನನ್ನನ್ನು ಕೂಡಿಸಿರಿ. (ವಿಜಯರಾಯರು ಅವಳ ಕೈಹಿಡಿದು ಎಬ್ಬಿಸುವರು)

**ವಿಜಯ**—ಬೇಗನೇ ಕೂಡು. (ಕೂಡುವಳು) ಪ್ರಸಂಗವು ಹೇಗೋ ಪಾರಾಯಿತು. ಇನ್ನುಮೇಲೆ ಅವಳು ಬರಲಿ—!

(ಪೂರ್ಣಿಮಾದೇವಿಯು ಬರುವಳು)

**ಪೂರ್ಣಿಮಾ**—ನಾನು ನಿಮ್ಮನ್ನು ಒಂದು ಮಾತು ಕೇಳಬೇಕಾಗಿದೆ. ನನಗೆ ನನ್ನ ತವರುಮನೆಯವರು ಕೊಟ್ಟ ಚಂದ್ರಹಾರ, ನಿಮ್ಮ ಹತ್ತಿರಲೇ ಇರುವದಲ್ಲವೆ ?

**ವಿಜಯ**—ಹೌದು-ಇದೆ. ಅದು ಈಗೇಕೆ ಬೇಕು? (ನೋಡಿ) ಇವಳಾರು—?

**ಧನಿಷ್ಠಾ**—(ಪ್ರವೇಶಿಸಿ) ನೀವು ಮನೆತನಸ್ಥರು - ನಾವು ನಾಯಕಸಾನಿಯರು - ನಿಮ್ಮನ್ನು ಕೇಳದೆ ನಾನು, ನಿಮ್ಮ ಮನೆಯಲ್ಲಿ ಪ್ರವೇಶಿಸಿದೆನೆಂದು, ನಿಮಗೆ ಕೋಪ ಬಂದೀತು; ಅದಕ್ಕೆ ಉಪಾಯವಿಲ್ಲ. ನನ್ನ ಮಗಳು, ಶತತಾರೆ ಇಲ್ಲಿ ಇರುವಳೆಂದು ತಿಳಿದುಬಂತು, – ಕಾರಣ ಅವಳ ಶೋಧಕ್ಕಾಗಿ ನಾನು ಬಂದೆ.

**ವಿಜಯ**—ಆದರೇ—

**ಪೂರ್ಣಿಮಾ**— ಕೇಳಿದಿರಾ-ನಿಮ್ಮ ಏಕಾಂತವು ಅವಳಿಗೂ ಗೊತ್ತಾಗಿರುವದು.

**ಧನಿಷ್ಠಾ**—ಅವಳು ಏಕೆ ಬಂದಳು - ಅದು ನನಗೆ ತಿಳಿಯದೇ ಇದ್ದರೂ - ನೀವು ಅಂಥ ತಿಳಿಯದ ಹುಡುಗೆಯನ್ನು ಠಕ್ಕಿಸಿ ಮನೆಯಲ್ಲಿರಿಸಿಕೊಳ್ಳುವದು ಸರಿಯಲ್ಲ.

**ವಿಜಯ**—ಅವಳನ್ನು, ನಾನು ಮನೆಯಲ್ಲಿ ಇರಿಸಿಕೊಂಡೆನೆಂದು, ನಿಮಗೆ ಯಾರು ಹೇಳಿದರು ? ಅದೂ ಅಲ್ಲದೆ, – ನಾನಾದರೂ ಅಂತಹ ಕೆಲಸವನ್ನು ಏಕೆ ಮಾಡಲಿ ?

**ಪೂರ್ಣಿಮಾ**—ಛೀ - ಛೀ - ಅವರಿಂದ ಏಂದಾದರೂ ಇಂತಹ ಕೆಲಸವಾದೀತೇ—? ಕೇವಲ ಸಾಧುಪುರುಷರಲ್ಲವೇ ಇವರು ! ಅಮ್ಮಾ - ನಿಜವಾಗಿ ನಾನು ಹೇಳುವದನ್ನು ಕೇಳಿರಿ. ನಿಮ್ಮ ಹುಡುಗಿಗೆ ಹುಚ್ಚು ಹಿಡಿಸಿದವರು ಇವರೇ—!

**ಧನಿಷ್ಠಾ**—ಏನು ! ಸತ್ಯವಾಗಿ ಹೇಳುವಿರಾ—?

**ವಿಜಯ**—ಛೀ – ಅಂತಹ ಯಾವ ಪ್ರಸಂಗವೂ ಇಲ್ಲ. ಇವಳು ಸುಮ್ಮನೇ ನನ್ನ ಬಾಯಿ ಬಡಿಯುತ್ತಾಳೆ.

**ಪೂರ್ಣಿಮಾ**—ಅಮ್ಮಾ ನಾನು ಸತ್ಯವಾಗಿ ಹೇಳುತ್ತೇನೆ. ಇವರು, ನಿಮ್ಮ ಮಗಳಿಗೆ ಆಶ್ರಯಕೊಟ್ಟು, ನನ್ನನ್ನು ಮನೆಬಿಟ್ಟು ಹೊರಗೆ ಹಾಕುವ ಹಂಚಿಕೆ ಹಾಕಿದ್ದಾರೆ.

**ವಿಜಯ**—ನೀವು ಅವಳ ಮಾತನ್ನೇನು ಕೇಳುವಿರಿ ? ಇತ್ತೀಚಿಗೆ ಅವಳಿಗೆ ಹುಚ್ಚು ಹಿಡಿದಿದೆ ಹುಚ್ಚು! ಆ ಹುಚ್ಚು ತಲೆಗೇರಿದಾಗ-ಅವಳು ಹೀಗೇ ಬಡಬಡಿಸುವದು.

**ಪೂರ್ಣಿಮಾ**—ನಿಮಗೇ ಆ ಶತತಾರೆಯ ಹುಚ್ಚು ಹಿಡಿದಿರುವದು! ನನಗಾರ ಹುಚ್ಚು ಹಿಡಿದೀತು?

**ವಿಜಯ**—ಯಾರದೋ—? (ನೋಡಿ) ಅದೋ ನೋಡು, ಬರುತ್ತಿದ್ದಾರೆ-, ಅವರು! (ಆನಂದಶೇಟರು ಬರುವರು)

**ಧನಿಷ್ಠಾ**—ಬನ್ನಿರಿ-ಬನ್ನಿರಿ. ಒಳ್ಳೆಯ ಸಮಯಕ್ಕೇ ಬಂದಿರಿ. ಬಹಳ ಯೋಗ್ಯವಾಯಿತು. ದೇವರೇ ಕಳಿಸಿಕೊಟ್ಟನು.

**ವಿಜಯ**—(ಹೆಂಡತಿಗೆ) ಏಕೇ—? ನಿನಗೂ ಸಂತೋಷವಾಯಿತೇ? ಇದೋ ನೋಡು-ನಿನ್ನ ಆನಂದಶೇಟರು.

**ಆನಂದ**—ವಿಜಯರಾಯರೇ - ಇದೋ ನಾನೇನು ಇಲ್ಲಿಗೆ ಮುಚ್ಚುಮರೆಯಿಂದ ಬಂದಿಲ್ಲ. ಪ್ರಸಿದ್ಧವಾಗಿ ಬಂದಿದ್ದೇನೆ; ಏಕೆಂದರೆ - ಇಷ್ಟು ಜನರ ಪ್ರತ್ಯಕ್ಷವಾಗಿ ನಿಮ್ಮ ನೀಚಕೃತ್ಯದ ಬಗ್ಗೆ, ಸಮರ್ಪಕವಾದ ಉತ್ತರ ತೆಗೆದುಕೊಳ್ಳುವದಕ್ಕೆ ನಾನು ಈಗ ಬಂದದ್ದು!

**ವಿಜಯ**—ಹಾಗಿದ್ದರೆ, ಅದಕ್ಕೇಕೆ ಹೀಗೆ ಪ್ರಸಿದ್ಧವಾಗಿ ಬರಬೇಕಿತ್ತು? ತಮ್ಮ ಗೋಸ್ಕರ ಕೋಠಡಿಯು ಸಿದ್ಧವಾಗಿರುವದು, ತಾವು ಒಳಗೆ ಪ್ರವೇಶ ಮಾಡುವದಷ್ಟೇ ಅವಕಾಶ, ಹೊರಗಣಿಂದ ಬೀಗಹಾಕಲು ಪ್ರತಿಪದೆಯು ಸಿದ್ಧವಾಗಿರುತ್ತಾಳೆ!

**ಪೂರ್ಣಿಮಾ**—ಇಂತಹ ಪೋಡಿತನದ ಮಾತುಗಳನ್ನು ಮತ್ತೊಮ್ಮೆ ಮಾತಾಡಿದರೆ, ನಿಮ್ಮ ನಾಲಗೆಯೇ ಕಳಚಿ ಭೂಮಿಗೆ ಬಿದ್ದೀತು. ಸುಟ್ಟ ಪ್ರತಿಪದೆಯು ಮಾಡಿದ ಅಪರಾಧಕ್ಕಾಗಿ, ಸುಮ್ಮನೇ ನನ್ನ ಮೇಲೇಕೆ ಆರೋಪ?

**ವಿಜಯ**—ನಿಮ್ಮ ಉಭಯತರ ವಿಚಾರದಿಂದಲೇ ನಡೆದ ಕಾರ್ಯದಲ್ಲಿ, ಪ್ರತಿಪದೆಯದೇನು ಅಪರಾಧ? ಅವಳು ಚಾಕರಳು - ಅಪ್ಪಣೆಯಾದಂತೆ - ಮಾಡುವದಷ್ಟೇ ಅವಳ ಕೆಲಸ!

**ಧನಿಷ್ಠಾ**—ನಿಮ್ಮ ಜಗಳವನ್ನು ಕಟ್ಟಿಕೊಂಡು ನಾನೇನು ಮಾಡಲಿ? ನನ್ನ ಮಗಳಿಗೋಸ್ಕರ ನಾನು ಇಲ್ಲಿಗೆ ಬಂದದ್ದು, ಅವಳು ಈ ಮನೆಯಲ್ಲಿರುವಳೊ ಇಲ್ಲವೊ ಹೇಳಿರಿ?

**ವಿಜಯ**—ಏನು – ಅವಳೇ – ಈ ಮನೆಯಲ್ಲಿಯೇ—? ಇಲ್ಲಿಗೆ ಬರಲು ಅವಳಿಗೆ ಕಾರಣವೇನಿದೆ? ಮೇಲಾಗಿ - ಅವಳ ಪರಿಚಯವೂ ನನಗಿಲ್ಲ!

**ಪೂರ್ಣಿಮಾ**—ಏನಂದಿರಿ – ಪರಿಚಯವೇ ಇಲ್ಲವೇ–, ತುಂಬಿದ ಬೀದಿಯಲ್ಲಿ ಅವಳನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡಿದ್ದಿರಿ, ಈಗ ಪರಿಚಯವೇ ಇಲ್ಲವೆಂದು ಹಾರಿಸಿ ಹೇಳುವದಕ್ಕೆ ನಿಮಗೆ ಏನೂ ಅನಿಸುವದಿಲ್ಲವೆ?

**ಧನಿಷ್ಠಾ**—ಏನು! ತೊಡೆಯ ಮೇಲೆಯೇ, ಯಾವಾಗ, ಎಲ್ಲಿ? ಹೇಳಿರಿ ನೋಡುವಾ—?

**ಪೂರ್ಣಿಮಾ**—ನಾನೇಕೆ ಹೇಳಲಿ ಅದನ್ನು. ಅದೊ – ಅಲ್ಲಿ ಆ ಗಿಡದ ಕೆಳಗೆ – ಅವರನ್ನೇ ಕೇಳಿರಿ. ಪಾಪಮಾಡಿದವರು ಅವರು! ಅವರಿಂದಲೆ ಅದರ ಉಚ್ಚಾರವೂ ಆಗಲಿ. ನಾನೇಕೆ ಉಚ್ಚರಿಸಲಿ!

**ವಿಜಯ**—ನೋಡಿದಿರಾ – ಹೇಗೆ ಕಿಡಿಗಳನ್ನು ತೂರುತ್ತಾಳೆ.

**ಧನಿಷ್ಠಾ**—ಅದು ಹೋಗಲಿ. ತೊಡೆಯಮೇಲೆ ಯಾವಾಗ ಕುಳ್ಳಿರಿಸಿಕೊಂಡಿದ್ದರು?

**ಪೂರ್ಣಿಮಾ**—ನಿನ್ನೆ ಬೆಳಿಗ್ಗೆ - ಅದೋ ಆ ಮಾವಿನ ಮರದ ಕೆಳಗೆ.

**ಆನಂದ**—ಅದು ಹಾಗಿಲ್ಲ. ಪೂರ್ಣಿಮಾದೇವಿಯರೇ ಅದೆಲ್ಲ ಸುಳ್ಳು. ನಾನು ಪ್ರಮಾಣಮಾಡಿ ಹೇಳುತ್ತೇನೆ.

**ವಿಜಯ**—ಮತ್ತು ನಾನೂ ಸಹ ಪ್ರಮಾಣಮಾಡಿ ಹೇಳುವದೇನಂದರೆ, ಇದರಲ್ಲಿ ಒಂದಕ್ಷರ ಕೂಡ ಸತ್ಯವಿಲ್ಲ. (ಆನಂದಶೇಟರ ಹತ್ತಿರ ಹೋಗಿ ಕಿವಿಯಲ್ಲಿ ಮಾತಾಡುವರು)

**ಪೂರ್ಣಿಮಾ**—(ಸ್ವ) ತಿಳಿಯಿತು - ತಿಳಿಯಿತು -, ಕಳ್ಳನಿಗೆ ಕಳ್ಳನೇ ಸಹಾಯಕನು. ಇವರಿಬ್ಬರೂ ಏನು ಮಾತಾಡಿಕೊಂಡಿದ್ದಾರು?

**ವಿಜಯ**— ಧನಿಷ್ಠಾಬಾಯಿಯವರೇ - ಅವಳೇನು ಹೇಳುತ್ತಾಳೆ, ನೀವೇನು ಕೇಳುತ್ತೀರಿ, ದಾರಿಹೋಕನಿಗೆ ಕೂಡ ಅಂಥ ಸಂಶಯ ಬರಲಾರದು!

**ಆನಂದ**—ಹಾಗೆ ಸಂಶಯ ತಕ್ಕೊಳ್ಳುವದೆಂದರೇ–, ಮಹಾ ಪಾತಕವೇ ಸರಿ!

**ಪೂರ್ಣಿಮಾ**—ಅವರ ಮಾತನ್ನೇನು ಕೇಳುವಿರಿ ನೀವು - ಅವರಿಬ್ಬರೂ ಹೆಚ್ಚಿನ ಸುಳ್ಳುಗಾರರು—!

**ಆನಂದ**—ಇದೋ ಇಲ್ಲಿ ಕೇಳಿರಿ. ಮಾರ್ಗದಲ್ಲಿ - ಶತತಾರೆಗೆ ಮೂರ್ಛೆ ಬಂದು ಬಿದ್ದಳು, ಆಗ ವಿಜಯರಾಯರು ಅವಳನ್ನು ಸಾವರಿಸಿದರು. ಇದರಲ್ಲಿ ವಿಜಯರಾಯರದೇನು ಅಪರಾಧವು ?

**ಧನಿಷ್ಠಾ**—ಇದರಲ್ಲಿ ಅಪರಾಧವೇನಿದೆ ? ಉಪಕಾರಕ್ಕೆ ಅಪಕಾರವೆನ್ನಬೇಕೆ ? ಅದೆಲ್ಲ ನನಗೆ ಗೊತ್ತಿದೆ. ಮನೆಗೆ ಬಂದಮೇಲೆ ಸಹ ಅವಳು ಮತ್ತೊಮ್ಮೆ ಮೂರ್ಛೆ ಬಂದು ಬಿದ್ದಳು.

**ವಿಜಯ**—ಇದರ ಮೇಲಿಂದ ನೀವೇ ಯೋಚಿಸಿರಿ ? ಈ ಅರಣ್ಯಪಂಡಿತಳು ಅದಕ್ಕೆ ಬೇರೆಯ ಅರ್ಥವನ್ನೇ ಮಾಡಿದಳು.

**ಆನಂದ**—ಸ್ವಾಮೀ ನಾನು ಹೇಳುವದೂ ಅದನ್ನೇ, ಶತತಾರೆಯೂ ಸ್ವಲ್ಪ ಸೆಡಕುಗಾರ್ತಿಯು, ಅಂತೆಯೇ ನನ್ನದೂ ಅವಳದೂ ಕೂಡಿ ನಡೆಯುವದಿಲ್ಲ; ಆದರೆ ಶೀಲದ ಮಾತು ಬಂದರೆ, ನಾನಾ ಅನ್ನುವ ಗರತಿಯರನ್ನು ಕೂಡ ಅವಳು ನಾಚಿಸುವಳು.

**ವಿಜಯ**—ಯೋಗ್ಯ! ನಿಜವಾಗಿಯೂ - ನೀವಾಡುವ ಮಾತು ತೀರಾ ಯೋಗ್ಯವಾಗಿದೆ. ಧನಿಷ್ಠಾಬಾಯಿಯವರೇ ಈಗ ನೀವೇ ಹೇಳಿರಿ, ಈ ಪ್ರಕರಣದಲ್ಲಿ ನನ್ನದೇನಾದರೂ ದೋಷವಿದೆಯೇ ?

**ಪೂರ್ಣಿಮಾ**—ನೀವು ಹೇಳುವ ಇದೆಲ್ಲವೂ ಸತ್ಯವೇ ಇರುವುದೇ ? ಇಲ್ಲಾ ಇನ್ನೂ ಕೆಲವು ಕಳ್ಳತನವನ್ನು ಬಚ್ಚಿಟ್ಟಿರುವಿರಿ ? ಅವಳು ನಿಮಗೆ ಕಾಣಿಕೆ ಕೊಟ್ಟ ಭಾವಚಿತ್ರದ ಮಾತನ್ನೇಕೆ ಬಚ್ಚಿಟ್ಟಿರಿ ?

**ವಿಜಯ**—ನನಗೆ ಕಾಣಿಕೆ ಅವಳು ಕೊಟ್ಟಳೋ, ಅಥವಾ ಈ ಆನಂದಶೇಟರೇ ನಿನಗೆ ಕಾಣಿಕೆ ಕೊಟ್ಟರೋ ?

**ಪೂರ್ಣಿಮಾ**—ಆನಂದಶೇಟರೇ ಕೇಳಿರಿ, ಸವಾರಿಯ ಮುಖದಿಂದ ಹೊರಬೀಳುವ ಈ ಮುಕ್ತಾಫಲಗಳನ್ನು!

**ಆನಂದ**—ವಿಜಯರಾಯರೇ – , ನೀವಿದನ್ನು ಕೇವಲ ಸುಳ್ಳು ಹೇಳುವಿರಿ ! ಮೂಲತಃ ನಾನು ಆ ಭಾವಚಿತ್ರವನ್ನು ಇವರಿಗೆ ಕೊಟ್ಟವನೇ ಅಲ್ಲ.

**ವಿಜಯ**— ಈಗ ಮಾತ್ರ ನಿಮ್ಮ ಸುಳ್ಳೇ ಮಾರಿದ್ದಾಯಿತು ! ನೀವೇ ಅದನ್ನು ಕೊಟ್ಟವರು, ಇವಳು ಆ ಭಾವಚಿತ್ರದ ಚುಂಬನ ತೆಗೆದುಕೊಂಡ

ದ್ದನ್ನು, ನಾನೇ ಕಣ್ಣಾರೆ ಕಂಡಿದ್ದೇನೆ, ಮತ್ತು ಆಗಲೇ ನಾನು ಅದನ್ನು ಅವಳ ಕೈಯಿಂದ ಕಸಿದುಕೊಂಡೆನು.

**ಆನಂದ**—ಆದ ಸಂಗತಿ ಹಾಗಲ್ಲ. ನಾನು ಆ ಭಾವಚಿತ್ರವನ್ನು ಶತತಾರೆಗೆ ಕೊಟ್ಟಿದ್ದೆನು. ಅವಳಿಗೆ ಮೂರ್ಛೆಬಂದಾಗ ಅದು ಅವಳ ಕೈಯಿಂದ ಜಾರಿ ಬಿತ್ತು, ಮತ್ತು ಆಮೇಲೆ ಅದು ನಿಮ್ಮ ಪೂರ್ಣಿಮಾದೇವಿಯವರ ಕೈಗೆ ಸಿಕ್ಕಿತು.

**ಪೂರ್ಣಿಮಾ**—ಹೌದು - ಹೀಗೆ ಆಗಿರುವದೇನೋ ನಿಜ. ಸುಮ್ಮನೇ ಸುಳ್ಳೇಕೆ ಆಡಬೇಕು? ನನಗೆ ಭಾವಚಿತ್ರವು ಆ ಮರದ ಕೆಳಗೇ ಸಿಕ್ಕಿತು.

**ಆನಂದ**—ಏಕೆ - ವಿಜಯರಾಯರೇ - ನಿಮಗೆ ನಂಬಿಕೆಯಾಯಿತೇ ?

**ವಿಜಯ**—ಭಾವಚಿತ್ರದ ವಿಷಯ ಹೋಗಲಿ ಬಿಡಿ, ನಿಮ್ಮ ಮಾತನ್ನೇ ನಾನು ಸತ್ಯವೆಂದು ತಿಳಿಯುತ್ತೇನೆ. ಆದರೆ ನೀವು, ಅವಳು ಮಲಗುವ ಕೋಣೆ ಯಲ್ಲಿ ಹೇಗೆ ಪ್ರವೇಶಮಾಡಿದಿರಿ ? ಇದಕ್ಕೆ ಉತ್ತರ ಕೊಡಿರಿ.

**ಪೂರ್ಣಿಮಾ**—ಅದಕ್ಕೆ ಸರಿಯಾದ ಉತ್ತರವನ್ನು ನಾನು ಆಗಲೇ ಹೇಳಿರು ವೆನು. ಅದೆಲ್ಲ ಪ್ರತಿಪದೆಯದೇ ತಪ್ಪು. ಅದರಲ್ಲಿ ಆನಂದಶೇಟರ ಕಡೆಗೆ ಯಾವ ದೋಷವೂ ಇಲ್ಲ.

**ಧನಿಷ್ಠಾ**—ನನಗೆ - ಈಗ ಎಲ್ಲವೂ ಹೊಳೆಯಿತು. ವಿಜಯರಾಯರೇ ಇದೆಲ್ಲ ಸಂಶಯ ನಿಮ್ಮದು, ಮತ್ತು ಅದೇ ನಿಮ್ಮನ್ನು ಬಾಧಿಸುತ್ತಿರುವದು. ಆದರೆ ಪೂರ್ಣಿಮಾದೇವಿಯವರು ಮಾತ್ರ, ಸುಮ್ಮನೇ ನನ್ನ ಮಗಳನ್ನು ಈ ಗೊಂದಲದಲ್ಲಿ ಎಳೆದರು.

**ಪೂರ್ಣಿಮಾ**—ಸುಮ್ಮನೇ ಎಳೆದೆನೆ ನಾನು ! ಬಂದವರೆಲ್ಲರೂ ಅವರ ಪಕ್ಷ ಗಟ್ಟಿಯೇ ಮಾತಾಡುತ್ತಾರೆ. ನೀವು ಬೇಕಾದಂತೆ ಮಾತಾಡಿರಿ. ನಾನು ಈಗಲೇ ನಮ್ಮಣ್ಣನ ಮನೆಗೆ ಹೊರಟು ಹೋಗುತ್ತೇನೆ.

**ವಿಜಯ**—ಬಹಳ ಆನಂದದಿಂದ ನೀನು, ನಿಮ್ಮ ಅಣ್ಣನ ಕಡೆಗೆ ಹೋದೀ, ಆದರೆ ನಾವು ನಿನ್ನನ್ನು ಹೋಗಗೊಟ್ಟರಲ್ಲವೇ—? (ಅವಳ ದಾರಿ ಕಟ್ಟಿ ವನು)

**ಆನಂದ**—ಇದೋ ಇಲ್ಲಿ ಕೇಳಿರಿ. ಮಾರ್ಗದಲ್ಲಿ - ಶತತಾರೆಗೆ ಮೂರ್ಛೆ ಬಂದು ಬಿದ್ದಳು, ಆಗ ವಿಜಯರಾಯರು ಅವಳನ್ನು ಸಾವರಿಸಿದರು. ಇದರಲ್ಲಿ ವಿಜಯರಾಯರದೇನು ಅಪರಾಧವು ?

**ಧನಿಷ್ಠಾ**—ಇದರಲ್ಲಿ ಅಪರಾಧವೇನಿದೆ ? ಉಪಕಾರಕ್ಕೆ ಅಪಕಾರವೆನ್ನಬೇಕೆ ? ಅದೆಲ್ಲ ನನಗೆ ಗೊತ್ತಿದೆ. ಮನೆಗೆ ಬಂದಮೇಲೆ ಸಹ ಅವಳು ಮತ್ತೊಮ್ಮೆ ಮೂರ್ಛೆ ಬಂದು ಬಿದ್ದಳು.

**ವಿಜಯ**—ಇದರ ಮೇಲಿಂದ ನೀವೇ ಯೋಚಿಸಿರಿ ? ಈ ಅರಣ್ಯಪಂಡಿತಳು ಅದಕ್ಕೆ ಬೇರೆಯ ಅರ್ಥವನ್ನೇ ಮಾಡಿದಳು.

**ಆನಂದ**—ಸ್ವಾಮೀ ನಾನು ಹೇಳುವದೂ ಅದನ್ನೇ, ಶತತಾರೆಯೂ ಸ್ವಲ್ಪ ಸಿಡಕುಗಾರ್ತಿಯು, ಅಂತೆಯೇ ನನ್ನದೂ ಅವಳದೂ ಕೂಡಿ ನಡೆಯುವದಿಲ್ಲ; ಆದರೆ ಶೀಲದ ಮಾತು ಬಂದರೆ, ನಾನಾ ಅನ್ನುವ ಗರತಿಯರನ್ನು ಕೂಡ ಅವಳು ನಾಚಿಸುವಳು.

**ವಿಜಯ**—ಯೋಗ್ಯ! ನಿಜವಾಗಿಯೂ - ನೀವಾಡುವ ಮಾತು ತೀರಾ ಯೋಗ್ಯವಾಗಿದೆ. ಧನಿಷ್ಠಾಬಾಯಿಯವರೇ ಈಗ ನೀವೇ ಹೇಳಿರಿ, ಈ ಪ್ರಕರಣದಲ್ಲಿ ನನ್ನದೇನಾದರೂ ದೋಷವಿದೆಯೋ ?

**ಪೂರ್ಣಿಮಾ**—ನೀವು ಹೇಳುವ ಇದೆಲ್ಲವೂ ಸತ್ಯವೇ ಇರುವುದೇ ? ಇಲ್ಲಾ ಇನ್ನೂ ಕೆಲವು ಕಳ್ಳತನವನ್ನು ಬಚ್ಚಿಟ್ಟಿರುವಿರಿ ? ಅವಳು ನಿಮಗೆ ಕಾಣಿಕೆ ಕೊಟ್ಟ ಭಾವಚಿತ್ರದ ಮಾತನ್ನೇಕೆ ಬಚ್ಚಿಟ್ಟಿರಿ ?

**ವಿಜಯ**—ನನಗೆ ಕಾಣಿಕೆ ಅವಳು ಕೊಟ್ಟಳೋ, ಅಥವಾ ಈ ಆನಂದ ಶೇಟರೇ ನಿನಗೆ ಕಾಣಿಕೆ ಕೊಟ್ಟರೋ ?

**ಪೂರ್ಣಿಮಾ**—ಆನಂದಶೇಟರೇ ಕೇಳಿರಿ, ಸವಾರಿಯ ಮುಖದಿಂದ ಹೊರ ಬೀಳುವ ಈ ಮುಕ್ತಾಫಲಗಳನ್ನು !

**ಆನಂದ**—ವಿಜಯರಾಯರೇ – , ನೀವಿದನ್ನು ಕೇವಲ ಸುಳ್ಳು ಹೇಳುವಿರಿ ! ಮೂಲತಃ ನಾನು ಆ ಭಾವಚಿತ್ರವನ್ನು ಇವರಿಗೆ ಕೊಟ್ಟವನೇ ಅಲ್ಲ.

**ವಿಜಯ**— ಈಗ ಮಾತ್ರ ನಿಮ್ಮ ಸುಳ್ಳೇ ಮಿರಿದ್ದಾಯಿತು ! ನೀವೇ ಅದನ್ನು ಕೊಟ್ಟವರು, ಇವಳು ಆ ಭಾವಚಿತ್ರದ ಚುಂಬನ ತೆಗೆದುಕೊಂಡ

ದ್ದನ್ನು, ನಾನೇ ಕಣ್ಣಾರೆ ಕಂಡಿದ್ದೇನೆ, ಮತ್ತು ಆಗಲೇ ನಾನು ಅದನ್ನು ಅವಳ ಕೈಯಿಂದ ಕಸಿದುಕೊಂಡೆನು.

**ಆನಂದ**—ಆದ ಸಂಗತಿ ಹಾಗಲ್ಲ. ನಾನು ಆ ಭಾವಚಿತ್ರವನ್ನು ಶತತಾರೆಗೆ ಕೊಟ್ಟಿದ್ದೆನು. ಅವಳಿಗೆ ಮೂರ್ಛೆಬಂದಾಗ ಅದು ಅವಳ ಕೈಯಿಂದ ಜಾರಿ ಬಿತ್ತು, ಮತ್ತು ಆಮೇಲೆ ಅದು ನಿಮ್ಮ ಪೂರ್ಣಿಮಾದೇವಿಯವರ ಕೈಗೆ ಸಿಕ್ಕಿತು.

**ಪೂರ್ಣಿಮಾ**—ಹೌದು - ಹೀಗೆ ಆಗಿರುವದೇನೋ ನಿಜ. ಸುಮ್ಮನೇ ಸುಳ್ಳೇಕೆ ಆಡಬೇಕು? ನನಗೆ ಭಾವಚಿತ್ರವು ಆ ಮರದ ಕೆಳಗೇ ಸಿಕ್ಕಿತು.

**ಆನಂದ**—ಏಕೆ - ವಿಜಯರಾಯರೇ - ನಿಮಗೆ ನಂಬಿಕೆಯಾಯಿತೇ ?

**ವಿಜಯ**—ಭಾವಚಿತ್ರದ ವಿಷಯ ಹೋಗಲಿ ಬಿಡಿ, ನಿಮ್ಮ ಮಾತನ್ನೇ ನಾನು ಸತ್ಯವೆಂದು ತಿಳಿಯುತ್ತೇನೆ. ಆದರೆ ನೀವು, ಅವಳು ಮಲಗುವ ಕೋಣೆ ಯಲ್ಲಿ ಹೇಗೆ ಪ್ರವೇಶಮಾಡಿದಿರಿ ? ಇದಕ್ಕೆ ಉತ್ತರ ಕೊಡಿರಿ.

**ಪೂರ್ಣಿಮಾ**—ಅದಕ್ಕೆ ಸರಿಯಾದ ಉತ್ತರವನ್ನು ನಾನು ಆಗಲೇ ಹೇಳಿರು ವೆನು. ಅದೆಲ್ಲ ಪ್ರತಿಪದೆಯದೇ ತಪ್ಪು. ಅದರಲ್ಲಿ ಆನಂದಶೇಟರ ಕಡೆಗೆ ಯಾವ ದೋಷವೂ ಇಲ್ಲ.

**ಧನಿಷ್ಠಾ**—ನನಗೆ - ಈಗ ಎಲ್ಲವೂ ಹೊಳೆಯಿತು. ವಿಜಯರಾಯರೇ ಇದೆಲ್ಲ ಸಂಶಯ ನಿಮ್ಮದು, ಮತ್ತು ಅದೇ ನಿಮ್ಮನ್ನು ಬಾಧಿಸುತ್ತಿರುವದು. ಆದರೆ ಪೂರ್ಣಿಮಾದೇವಿಯವರು ಮಾತ್ರ, ಸುಮ್ಮನೇ ನನ್ನ ಮಗಳನ್ನು ಈ ಗೊಂದಲದಲ್ಲಿ ಎಳೆದರು.

**ಪೂರ್ಣಿಮಾ**—ಸುಮ್ಮನೇ ಎಳೆದೆನೆ ನಾನು ! ಬಂದವರೆಲ್ಲರೂ ಅವರ ಪಕ್ಷ ಗಟ್ಟಿಯೇ ಮಾತಾಡುತ್ತಾರೆ. ನೀವು ಬೇಕಾದಂತೆ ಮಾತಾಡಿರಿ. ನಾನು ಈಗಲೇ ನಮ್ಮಣ್ಣನ ಮನೆಗೆ ಹೊರಟು ಹೋಗುತ್ತೇನೆ.

**ವಿಜಯ**—ಬಹಳ ಆನಂದದಿಂದ ನೀನು, ನಿಮ್ಮ ಅಣ್ಣನ ಕಡೆಗೆ ಹೋದೀ, ಆದರೆ ನಾವು ನಿನ್ನನ್ನು ಹೋಗಗೊಟ್ಟರಲ್ಲವೇ—? (ಅವಳ ದಾರಿ ಕಟ್ಟು ವನು)

**ಪೂರ್ಣಿಮಾ**—ನಾನು ನಿಮ್ಮ ಹೆಂಡತಿಯಾದದ್ದೇ ತಪ್ಪಾಯಿತೋ ?
**ವಿಜಯ**—ಹೌದು. ಅದಕ್ಕೆ ಸಂದೇಹವೇನು ?
**ಪೂರ್ಣಿಮಾ**—ಅಂದರೆ ನನಗೆ ಇಷ್ಟು ಕೂಡ ಸ್ವತಂತ್ರತೆ ಇಲ್ಲವೋ ?
**ವಿಜಯ**—ಇಲ್ಲಾ - ಲೇಶಮಾತ್ರಕ್ಕೂ ಇಲ್ಲಾ—!
**ಪೂರ್ಣಿಮಾ**—ಅಂದರೆ ಇಡೀ ಜನ್ಮ ನನ್ನನ್ನು ನೀವು, ಹೀಗೇ ಪೀಡಿಸತಕ್ಕವರೋ ?
**ವಿಜಯ**—ಹೌದು - ಹೌದು - ಹೀಗೇ ಪೀಡಿಸತಕ್ಕವನು ನಾನು !
**ಪೂರ್ಣಿಮಾ**—ಹಾಗೇ ಆಗಲಿ. ನಿಮ್ಮ ಕೈಯಲ್ಲಿ ಸಿಕ್ಕಿದ್ದೇನೆ, ಬೇಕಾದ್ದು ಮಾಡಿರಿ.
**ಧನಿಷ್ಠಾ**—ಅದಿರಲಿ - ವಿಜಯರಾಯರೇ - , ನಮ್ಮ ಶತತಾರೆಯು ಖಂಡಿತವಾಗಿಯೂ ಇಲ್ಲಿಗೆ ಬಂದಿಲ್ಲವೇ ?
**ವಿಜಯ**—ಅವಳು ಇಲ್ಲಿ ಇದ್ದೂ, ನಾನು ಇಲ್ಲವೆಂದು ಹೇಳುತ್ತೇನೆಯೋ ? ಬೇಕಾದರೇ ನೀವು ಹುಡುಕಿರಿ, ನಾನು ಅಡಗಿಸಿರುವೆನೆಂದು ನಿಮಗೆ ಸಂಶಯವಿದ್ದರೆ !

(ಇಷ್ಟರಲ್ಲಿ ಶತತಾರೆಯೂ ಕೆಮ್ಮುವಳು)

**ಆನಂದ**—ಈಗಲೇ ಯಾರೋ ಕೆಮ್ಮಿದಂತೆ ಕೇಳಿಸಲಿಲ್ಲವೇ ?
**ವಿಜಯ**—(ಸ್ವ) ಛೇ - ಛೇ - ಘಾತವಾಯಿತು, ಘಾತವಾಯಿತು.
**ಆನಂದ**—ಏಕೆ - ವಿಜಯರಾಯರೇ ನಿಮಗೂ ಕೇಳಿಸಲಿಲ್ಲವೆ ?
**ವಿಜಯ**—ಒಳಗೆ ನಮ್ಮ ಪ್ರತಿಪದೆಯು ಕೆಲಸಮಾಡುತ್ತಿರುವಳು. ಅವಳೇನಾದರೂ ಕೆಮ್ಮಿರಬಹುದು. ಮತ್ತೇನು ?
**ಪೂರ್ಣಿಮಾ**—ಏನು - ಪ್ರತಿಪದೆಯು ಕೆಮ್ಮಿದಳೇ - ಇಲ್ಲ - ಅವಳು ಮನೆಯಲ್ಲಿಯೇ ಇಲ್ಲ, ಅವಳನ್ನು ನಾನು ಬೇರೆ ಕೆಲಸಕ್ಕೆ ಹೊರಗೆ ಕಳಿಸಿರುವೆನು.
**ವಿಜಯ**—ಪ್ರತಿಪದೆಯಲ್ಲದಿದ್ದರೆ - ವೃಶ್ಚಿಕನಿದ್ದೀತು !
**ಪೂರ್ಣಿಮಾ**—ಇದು ವೃಶ್ಚಿಕನ ಧ್ವನಿಯಲ್ಲ ; ಸ್ತ್ರೀಯ ಧ್ವನಿಯಂತೆ ಕೇಳಿ

**ವಿಜಯ**—ಸ್ತ್ರೀ ಧ್ವನಿಯೋ - ಸ್ತ್ರೀ ಎಲ್ಲಿದ್ದಾಳೆ ಇಲ್ಲಿ—! ಇದು ವೃಶ್ಚಿಕನ ಧ್ವನಿಯೋ!

**ಪೂರ್ಣಿಮಾ**—ಧ್ವನಿಯು ಆ ಪೆಟ್ಟಿಗೆಯ ಹಿಂದೆ ಕೇಳಿಸಿತು. ಹೋಗಿ ನೋಡುತ್ತೇನೆ. (ವಿಜಯರಾಯರು ಏ-ಏ-ಅನ್ನುತ್ತಾರೆ. ಪೂರ್ಣಿಮಾ ದೇವಿಯು ಹೋಗಿ ನೋಡುತ್ತಾಳೆ. ಶತತಾರೆಯು ಕೆಮ್ಮುತ್ತ ನಿಲ್ಲುತ್ತಾಳೆ.)

**ಪೂರ್ಣಿಮಾ**—ಇಪ್ಪೋ ನೋಡಿರಿ ವೃಶ್ಚಿಕನು. ವೃಶ್ಚಿಕನೇ-ಬಾರಪ್ಪಾ-ಬಾ-ಹೀಗೆ ಮುಂದೆ. (ಅವಳನ್ನು ಹಿಡಿದುತಂದು) ಏಕೆ ಮಹಾರಾಜ-, ಶತತಾರೆಯು ಮನೆಯಲ್ಲಿಲ್ಲವೇ? ಈಗ ಹೇಗೆ ಬಂದಳು? ಆಕಾಶದಿಂದ ಇಳಿದು ಬಂದಳೇ?

**ವೃಶ್ಚಿಕ**—(ಸ್ವ) ಇದೆಲ್ಲ ಪ್ರಸಂಗ ಮೈಮೇಲೇ ಬಂದಿತು. ಮಧ್ಯದಲ್ಲಿ ಇವಳಿಗೇಕೆ ಕೆಮ್ಮು ಬಂದಿದ್ದೀತಪ್ಪಾ—

**ಪೂರ್ಣಿಮಾ**—ಏನೇ-ನಮ್ಮ ಸವಾರಿಯು ಕರೆಕಳಿಸಿದ್ದರಿಂದ ನೀನು ಬಂದಿದ್ದೆಯಲ್ಲವೇ?

**ಶತತಾರಾ**—ಇಲ್ಲಾ - ನಾನಾಗಿಯೇ ಬಂದೆನು. ವಿಜಯರಾಯರದೇನೂ ದೋಷವಿಲ್ಲ.

**ಪೂರ್ಣಿಮಾ**—ಹಾಗಾದರೆ ನೀನು ಇಲ್ಲಿಗೇತಕ್ಕೆ ಬಂದೆ?

**ಶತತಾರಾ**—ನಿಮ್ಮ ಸತಿಪತಿಯರ ಪೋಡಿತನವು ನನ್ನ ಸುಖಕ್ಕೆ ತೊಂದರೆ ಮಾಡಿದ್ದರಿಂದ ನಾನು ಇಲ್ಲಿಯವರೆಗೆ ಬರಬೇಕಾಯಿತು.

**ಪೂರ್ಣಿಮಾ**—ಇದು ನನ್ನ ಪೋಡಿತನವಲ್ಲ, ಇವರದೇ ಪೋಡಿತನವು! ಇವರು ಸುಮ್ಮನೇ ಆನಂದಶೇಟರ ಮೇಲೆ ಇಲ್ಲದ್ದೊಂದು ಆರೋಪ ಹೊರಿಸಿದರು.

**ಆನಂದ**—ನಿಶ್ಚಯ - ಇದು ವಿಜಯರಾಯರದೇ ಪೋಡಿತನವು. ಆದರೆ ಧನಿಷ್ಠಾಬಾಯಿಯವರೇ-ಈ ಶತತಾರೆಯು ಇಲ್ಲಿಗೇತಕ್ಕೆ ಬಂದಳು, ಈ ಪೆಟ್ಟಿಗೆಯ ಹಿಂದೆ ಏಕೆ ಅಡಗಿಕೊಂಡು ಕುಳಿತಳು, ಇದಕ್ಕೆ ಸಮರ್ಪಕವಾದ ಉತ್ತರವು ದೊರಯಲೇ ಬೇಕು.

**ಶತತಾರಾ**—ಹೀಗೇಕೆ ಮರೆಮಾಚಿ ಕೇಳುವಿರಿ? ನಾನೇ ಹೇಳುತ್ತೇನೆ. ಆ ಭಾವಚಿತ್ರವನ್ನು ನೀವೇ ಪೂರ್ಣಿಮಾದೇವಿಗೆ ಕೊಟ್ಟಿರುವಿರೆಂದು ವಿಜಯರಾಯರು ನನಗೆ ಹೇಳಿದರು. ಆದರೆ ಅದು ನಿಜವೆಂದು ನನಗೆ ತೋರಲಿಲ್ಲ; ಅದಕ್ಕೋಸ್ಕರ ನಾನೇ ಪೂರ್ಣಿಮಾದೇವಿಗೆ ಭೆಟ್ಟಿಯಾಗಿ-ಸಂಶಯ ಪರಿಹಾರ ಮಾಡಿಕೊಳ್ಳಬೇಕೆಂದು ಬಂದೆನು. ಆದರೆ ಅಮ್ಮಾ - ಅವರು ಮನೆಯಲ್ಲಿ ಇರಲಿಲ್ಲ. ಅಷ್ಟರಲ್ಲಿ ನೀನು ಬಂದೆ. ನನಗೆ ಬಹಳ ಭಯವಾಯಿತು. ಅದಕ್ಕೋಸ್ಕರ ಈ ಪೆಟ್ಟಿಗೆಯ ಹಿಂದೆ ಅಡಗಿಕೊಂಡು ಕುಳಿತೆ.

**ಆನಂದ**—ಇವಳು ಹೇಳುವದು ನನಗಾದರೂ ಸತ್ಯವೆಂದೇ ತೋರುವದು.

**ಧನಿಷ್ಠಾ**—ಮಗಳೇ ಸತ್ಯಕ್ಕೆ ಸಾವೆಲ್ಲಿದೆ? ನೀನು ನನಗೆ ಮನೆಯಲ್ಲಿಯೇ ಈ ಸಂಗತಿಯನ್ನೆಲ್ಲ ಹೇಳಿದ್ದರೆ, ನಾನೇ ಬಂದು ಈ ಪೂರ್ಣಿಮಾದೇವಿಯನ್ನು ವಿಚಾರಿಸುತ್ತಿದ್ದೆ. ಆದದ್ದಾಯಿತು. ಇನ್ನುಮೇಲಾದರೂ ಎಲ್ಲರ ಸಂಶಯ ದೂರಾಯಿತಷ್ಟೇ?

**ಆನಂದ**—ನನ್ನ ಸಂಶಯವಂತೂ ದೂರವಾಯಿತು.

**ಶತತಾರಾ**—ಮೊದಲಿನಿಂದಲೂ, ನನಗೆ ಅಷ್ಟು ಸಂಶಯವೇ ಬಂದಿರಲಿಲ್ಲ.

**ಧನಿಷ್ಠಾ**—ಏಕೆ ವಿಜಯರಾಯರೇ ನಿಮ್ಮ ಯಾವತ್ತೂ ಸಂಶಯವು ದೂರವಾಯಿತೇ?

**ವಿಜಯ**—ಅದು ಹೇಗೆ ದೂರವಾದೀತು? ಸ್ವಲ್ಪ ಇತ್ತಕಡೆಗೆ ಬನ್ನಿರಿ ನಿಮಗೆ ಯಾವತ್ತೂ ಸಂಗತಿಯನ್ನು ತಿಳಿಸುತ್ತೇನೆ. ಆದರೆ ಇವಳ ಪ್ರತ್ಯಕ್ಷವಾಗಿ ಹೇಳುವದಿಲ್ಲ. (ಅವರೊಂದಿಗೆ ಹೋಗುತ್ತಾನೆ)

**ಪೂರ್ಣಿಮಾ**—ನನ್ನ ಪ್ರತ್ಯಕ್ಷವಾಗಿ ಏಕೆ ಹೇಳುವದಿಲ್ಲ? ಧನಿಷ್ಠಾಬಾಯಿಯವರೇ ನನಗಾದರೂ ಇವರ ಬಗ್ಗೆ ಎಷ್ಟೋ ಸಂಗತಿಗಳನ್ನು ಹೇಳಬೇಕಾಗಿದೆ. ನಾನೂ ಬರುತ್ತೇನೆ. (ಅವಳೂ ಹೋಗುವಳು)

**ಧನಿಷ್ಠಾ**—(ಹೋಗ ಹೋಗುತ್ತಾ) ಮಗಳೇ ನಾನು ಹೋಗಿ ಬರುವೆನು. ಆನಂದಶೇಟರೇ ನೀವು ಇಲ್ಲಿಯೇ ಇರುವಿರಲ್ಲವೇ? (ಶತತಾರೆ ಮತ್ತು ಆನಂದಶೇಟರು ಒಬ್ಬರಿಗೊಬ್ಬರು ಮುಖತಿರುವಿ ನಿಲ್ಲುವರು)

**ಶತತಾರಾ**—ಇನ್ನು ಮುಂದೆ, ನನ್ನಿಂದ ಇಂತಹ ಅಪರಾಧವು ಎಂದಿಗೂ ಆಗ ಲಾರದು.

**ಆನಂದ**—ನಾನಾದರೂ ಇನ್ನು ಮುಂದೆ ಎಂದೂ ಹೀಗೆ ಸಂಶಯ ತಕ್ಕೊಳ್ಳು ವದಿಲ್ಲ.

**ಶತತಾರಾ**—ನಿಜವಾಗಿಯೂ ನಾನು ಮಾಡಿದ್ದು - ಹೆಚ್ಚಿನ ಹುಚ್ಚುತನವಾ ಯಿತು.

**ಆನಂದ**—ನನ್ನದಾದರೂ ಇದು ಒಳ್ಳೇ ಮೂರ್ಖತನವಾಯಿತು.

**ಶತತಾರಾ**—ಆದದ್ದಾಯಿತು. ಇನ್ನು ಮೇಲೇತಕ್ಕೆ ಆ ವಿಷಯ !

**ಆನಂದ**—ಹೌದು - ಒಮ್ಮೆ ಆದಮೇಲೆ ನಾವು ಮಾಡುವದೇನು ?

**ಶತತಾರಾ**—ಆದರೆ ಈ ವಿನೋದವು ಇನ್ನೂ ಎಷ್ಟೊತ್ತು ಸಾಗುವದು ?

**ಆನಂದ**—ಆರು - ಮತ್ತು - ಮೂರು ಇವೆರಡರ ಸಮ್ಮಿಲನವಾಗುವದು ಹೇಗೆ ?

**ಶತತಾರಾ**—ಮೊದಲು ಕಲಹವನ್ನು ತೆಗೆದವರೇ, ಅದನ್ನು ಕೂಡಿಸಬೇಕು - ಬೇಕಾದರೆ ! ಮೊದಲು ನೀವು ಕ್ಷಮೆಯನ್ನು ಬೇಡುವವರೆಗೆ, ನಾನೇನು ಮಾತಾಡತಕ್ಕವಳಲ್ಲ.

**ಆನಂದ**—ಕ್ಷಮೆಯನ್ನು ಹೇಗೆ ಬೇಡಬೇಕು- ಅದು ತಿಳಿಯದ ವಿನಹ - ನಾನು ಮುಖದಿಂದ ಒಂದು ಶಬ್ದವನ್ನೂ ಉಚ್ಚರಿಸುವದಿಲ್ಲ.

**ಶತತಾರಾ**— ಅದರಲ್ಲೇನಿದೆ. ಕ್ಷಮೆಯನ್ನು ಬೇಡುವದೆಂದರೆ, ಕಾಲಿಗೇ ಬೀಳ ಬೇಕು ಹೀಗೆ ಅರ್ಥವಲ್ಲ. ಸುಮ್ಮನೇ ತಪ್ಪಾಯಿತು ಅಂದರೆ ಸಾಕು !

**ಆನಂದ**—ತಪ್ಪಾಯಿತೆಂದು ಒಂದು ನೂರು ಸಲ ಹೇಳಿದೆ, ಅಂದರೂ ಕೋಪ ಶಾಂತವಾಗಲಿಲ್ಲ; ಅದಕ್ಕೆ ನಾನೇನು ಮಾಡಲಿ ?

**ಶತತಾರಾ**—ನೂರು ಸಲ ಅಂದಂತೆ ಮತ್ತೊಂದು ಸಲ ಅನ್ನಬೇಕು ಅಷ್ಟೇ !

**ಆನಂದ**—ಸರಿ - ಇಷ್ಟು ತಿಳಿದಮೇಲೇನು - ಒಂದೇ ಸಲವೇಕೆ ನೂರು ಸಲ ಶತತಾರಾ - ಶತತಾರಾ—

**ಶತತಾರಾ**—ಆಯಿತು ಪ್ರಾರಂಭ—

**ಆನಂದ**—ಪ್ರಾಣವಲ್ಲಭೇ - ಶತತಾರೇ—

**ಶತತಾರಾ**—ಪ್ರಿಯಕರಾ - ಪ್ರಿಯವಲ್ಲಭಾ—

ರಾಗ ಭೈರವಿ ತಾಳ ದಾದರಾ

ಪ್ರಿಯನಾಥಾ ದೀನದಾಸಿಯಾ। ಅಪರಾಧ ಕ್ಷಮಿಸೈ ಕೃಪಾಕರನೇ ॥ ಪಲ್ಲ ॥ ಮನಕೆ ವಿಪುಲ ತೆರದಿ। ಅನುತಾಪಗೈದೇ ॥ ಅನುರಾಗವನು ರಾಗದೇ। ಮನೋಹರಾ ಮನ್ನಿಸೆನ್ನಾ ॥ ೧ ॥

**ಆನಂದ**—ನಾನು ನಿನ್ನಮೇಲೆ ಸುಳ್ಳು ಸಂಶಯ ತಕ್ಕೊಂಡೆನು, ತಪ್ಪಾಯಿತು, ತಪ್ಪಾಯಿತು - ತಪ್ಪಾಯಿತು.

**ಶತತಾರಾ**—ಸಾಕು - ಸಾಕು - ಸಾಕು —

**ಆನಂದ**—ನಗೆಮುಗುಳು ಅರಳಿತು - ಅರಳಿತು ! ಆಯಿತು !

**ಶತತಾರಾ**—ಆ ಭಾವಚಿತ್ರವನ್ನು ಕೊಡದೆ, ಆಯಿತೆಂದು ಹೇಳುವಿರಾ ?

**ಆನಂದ**—ತೆಗೆದುಕೊ ಈ ಭಾವಚಿತ್ರವನ್ನು. (ಕೊಡುವನು)

**ಶತತಾರಾ**—ಕೊನೆಗೆ ನೀವೇ ಸೋತಿರಿ- ಮೊದಲು ನೀವೇ ಮಾತಾಡಿದಿರಿ, ಆಮೇಲೆ ನಾನು—!

**ಆನಂದ**—ಏನೇ ನನ್ನ ನಿನ್ನ ಕಲಹದಲ್ಲಿ, ಯಾವಾಗಲೂ ಸೋಲತಕ್ಕವನು ನಾನೇ—

(ಇಷ್ಟರಲ್ಲಿ ವಿಜಯರಾಯರು ಮತ್ತು ಉಳಿದವರೂ ಬರುವರು)

**ವಿಜಯ**—ಈಗ ಮಾತ್ರ - ನನ್ನ ಮೂರ್ಖತನದ ಬಗ್ಗೆ ನನಗೇ ನಾಚಿಕೆಯಾಗುತ್ತಿದೆ, ನಗು ಬರುತ್ತಿದೆ. ಅದರಲ್ಲಿಯೂ ಇವಳ ಮೂರ್ಖತನವಂತೂ ಮಿತಿಮೀರಿತು. ಆನಂದಶೇಟರೇ ನೋಡಿದಿರಾ - ವಿಷಯ ಎಷ್ಟು ಅರ್ಥವಿಲ್ಲದ್ದು-, ಆದರೆ ಎಷ್ಟು ಅನರ್ಥಕ್ಕೆ ಕಾರಣವಾಯಿತು. ನಮ್ಮ ನಿಮ್ಮಲ್ಲಿ - ಅವಳು ಅವರು - ಈ ಸರ್ವನಾಮಗಳೇ ಮೋಸ ಮಾಡಿದವು.

**ಆನಂದ**—ನೀವು ಅವಳು ಎಂದರೆ ಪೂರ್ಣಿಮಾದೇವಿಯೆಂದೇ ತಿಳಿಯುತ್ತಿದ್ದಿರಿ.

**ವಿಜಯ**—ಮತ್ತು ನೀವು-, ಶತತಾರೆಯೆಂದೇ ತಿಳಿಯುತ್ತಿದ್ದಿರಿ ! ಅಂತೂ ನಾವೂ - ನೀವು ಕೂಡಿ ಭಂಗಿಯನ್ನೇ ಸೇದಿದ್ದೆವು ! ಇದೆಲ್ಲ ಏನಂದಿರಿ (ಕಿವಿಯಲ್ಲಿ ಹೇಳುವರು)

**ಪೂರ್ಣಿಮಾ**—ಶತತಾರಾ - ನೀನು ಅಂದದ್ದೇ ನಿಜವಾಯಿತು. ನಿಮ್ಮ

ತಾಯಿಯು ಹಾ - ಹಾ - ಅನ್ನುವಷ್ಟರಲ್ಲಿ, ನಮ್ಮೆಲ್ಲರ ಸಮಾಧಾನ ಮಾಡಿದರು. ತಲೆಯಲ್ಲಿ ಅದೇನು ಸೇರಿತ್ತೋ - ದೇವರೇ ಬಲ್ಲ - , ಹತ್ತೆಂಟು ಪ್ರಶ್ನೆಗಳಲ್ಲಿಯೇ ಎಲ್ಲವೂ ಬಗೆಹರಿಯಿತು.

**ಆನಂದ**—ವಿಜಯರಾಯರೇ ನಾನು - ನಿಮಗೆ ಹೇಳಲಿಲ್ಲವೇ, ನಿಮ್ಮ ಮನೆಯಲ್ಲಿ ನಾನು ಕಾಲುಹಾಕಿದ್ದು ನಿನ್ನೆಯೇ ಮೊದಲೆಂದು ; ಅದಕ್ಕೂ ಮೊದಲು ನಾನು ಎಂದೂ ಬಂದವನೇ ಅಲ್ಲ, ಮತ್ತು ನಿಮ್ಮ ಹೆಂಡತಿಯ ಕೂಡ ಮಾತಾಡಿದವನೂ ಅಲ್ಲ.

**ವಿಜಯ**—ಅದೆಲ್ಲ ತಿಳಿಯಿತು. ಸ್ವಾಮೀ - ಮನುಷ್ಯ ಒಮ್ಮೆ ಸಂಶಯದ ಪರ್ವತದ ಮೇಲಿನಿಂದ ಜಾರಹತ್ತಿದನೆಂದರೆ, ಹಾಗೇ ಜಾರುತ್ತಲೇ ಹೋಗುವನು. ಕನ್ನಡಕದ ಬಣ್ಣ ಯಾವುದೋ, ಸೃಷ್ಟಿಯೂ ಅದೇ ಬಣ್ಣದ್ದಾಗಿಯೇ ಕಾಣುವದು.

**ಧನಿಷ್ಠಾ**—ಪೂರ್ಣಿಮಾಬಾಯಿಯವರೇ - ನೀವು ಮಾತ್ರ ನನ್ನ ಮಗಳ ವಿಷಯಕ್ಕೆ ಸುಮ್ಮನೆ ಏನೋ ಕಲ್ಪನೆಮಾಡಿದಿರಿ.

**ವಿಜಯ**—ಇವಳದು ಪೂರ್ವದಿಂದಲೂ ಹೀಗೇ ಸಂಶಯ ತಕ್ಕೊಳ್ಳುವ ಸ್ವಭಾವವೇ—!

**ಪೂರ್ಣಿಮಾ**—ಮತ್ತು ತಾವೇನು - ನನ್ನಕಿಂತಲೂ ಹೆಚ್ಚಿನವರು.

**ವೃಶ್ಚಿಕ**—ಧಣಿಯರೇ - ನಾನು ಹೇಳುತ್ತಲೇ ಇದ್ದೆನಲ್ಲವೇ ? ಆದರೆ ನೀವು ನನ್ನನ್ನೇ ಮೂರ್ಖನೆಂದು ಹೇಳಿದಿರಿ.

**ಪ್ರತಿಪದೆ**—ವೃಶ್ಚಿಕಾ - ನಾನು ಬೀಗದ ಕೈಯನ್ನು ಕೊಡುವದಿಲ್ಲವೆಂದು ಹೇಳಿದಾಗ, ಅಮ್ಮನವರು ಹೇಗೆ ಕಣ್ಣು ಕೆಂಪಗೆ ಮಾಡಿದ್ದರು ಅದನ್ನು ನೋಡಿದಿಯಾ ?

**ಧನಿಷ್ಠಾ**—ವಿಜಯರಾಯರೇ - ಈ ಆನಂದಶೇಟರೂ ನಿಮ್ಮ ದಾರಿಯಲ್ಲಿಯೇ ಸಾಗಿದ್ದರು.

**ಆನಂದ**—ಹೌದು-ಹೌದು-ಅದೇ ನಿಜ, ಶತತಾರೆಯು ಪೂರ್ಣಿಮಾದೇವಿಯ ದಾರಿಹಿಡಿದು ಸಾಗಹತ್ತಿದಳು-, ನಾನು ವಿಜಯರಾಯರ ದಾರಿ ಹಿಡಿದೆ.

**ಶತತಾರಾ**—ಮೊದಲು ತಾವು ; ಆಮೇಲೆ ನಾನು—!

**ಧನಿಷ್ಠಾ**—ಆದದ್ದು ಆಗಿಹೋಯಿತು. ಇದೆಲ್ಲ ಆ ಭಾವಚಿತ್ರದ ಗಲಾಟೆಯೇ. ಇನ್ನು ಮುಂದೆ ಮಾತ್ರ ಎಲ್ಲರೂ ಎಚ್ಚರದಿಂದ ನಡೆದುಕೊಳ್ಳಬೇಕು ! (ಅಷ್ಟರಲ್ಲಿ ಸಾಧುವು "ಶಾಂತಿಯಿದೇ ಸೌಭಾಗ್ಯ" ಪಲ್ಲವಿಯನ್ನು ಅನ್ನುತ್ತ ಬರುವನು)

**ಸಾಧು**—ಏಕೆ - ವಿಜಯರಾಯರೇ - ನನ್ನ ಉಪದೇಶದ ಸತ್ಯತೆಯು ಈಗಾದರೂ ತಮ್ಮ ಅನುಭವಕ್ಕೆ ಬಂದಿತೇ ? ಇನ್ನು ಮೇಲಾದರೂ ನಮ್ಮ ಕಾರ್ತಿಕನಾಥನ ದೀಪೋತ್ಸವಕ್ಕಾಗಿ ಒಂದು ಮಣ ಎಣ್ಣೆಯನ್ನು ಕೊಡುವಿರೋ - ಇಲ್ಲವೋ ?

**ವಿಜಯ**—ಒಂದೇ ಮಣವೇಕೆ - ಎರಡು ಮಣ ಕೊಡುವೆನು ; ಮತ್ತು ಆ ಶುಭ ಸಮಯದಲ್ಲಿ ನಾವೆಲ್ಲರೂ ಕೂಡಿ ಆ ಕಾರ್ತಿಕನಾಥನನ್ನು ಪ್ರಾರ್ಥಿಸುವದೇನಂದರೇ—

ರಾಗ ಯಮುನ ತಾಳ ತ್ರಿವಟ

ಕರವಪಿಡಿಯೋ । ಭುವನಭರಣಾ ಶ್ರೀಕಾಂತಾ ॥ ಚರಣ ಕಮಲವನು ಸ್ಮರಿಸುವೆ ನಿರುತ । ಪರಾತ್ಪರಾ ಸುರವರೇಶಾ ॥ ಪಲ್ಲ ॥ ಖಲಭವ ಜಲಧಿಯ । ಭಯಾನಕ ಬಾಧೆಯು ॥ ತೊಲಗಿಸಿ ಸತಿತನ । ಪದಾರವಿಂದವ ತೋರಿಸೋ ॥ ಸುಲೋಚನಾ ಸದಯಾಶಿರಿವರದಾ ॥ ಫಳಿಲನೆ ನಮಿಸುವೆ ಕರುಣಿಸಿ ॥ ೧ ॥

**ಸಮಾಪ್ತ.**

———:———